ಮೈಸೂರು ವಿಶ್ವವಿದ್ಯಾನಿಲಯ

ಪ್ರಚಾರಪುಸ್ತಕಮಾಲೆ—೨೮

# ಪಾಶ್ಚಾತ್ಯ ರಾಜಕೀಯತತ್ತ್ವಗಳು

ಎಂ. ಯಾಮುನಾಚಾರ್ಯ, ಎಂ.ಎ.



ಟಾಟಾರ್ಯ ಎಲೆಕ್ಟ್ರಿಕ್ ಪ್ರೆಸ್
ಮೈಸೂರು
೧೯೪೧

ಬೆಲೆ: ೨ ಆಣೆ

## ಪ್ರಚಾರಪುಸ್ತಕಮಾಲೆ

## ಪುಸ್ತಕಗಳು ದೊರೆಯುವ ಸ್ಥಳಗಳು :

ಸೋಲ್ ಏಜೆಂಟ್ :

**ಸತ್ಯಶೋಧನ ಪುಸ್ತಕಭಂಡಾರ,**

**ಲ್ಯಾನ್ಸ್‌ಡೌನ್ ಬಿಲ್ಡಿಂಗ್ಸ್, ಮೈಸೂರು.**

---

೧. ಕರ್ಣಾಟಕ ಪ್ರಕಟನಾಲಯ, ಕೋಟೆ, ಬೆಂಗಳೂರು ಸಿಟಿ.

೨. ಮನೋಹರ ಗ್ರಂಥಭಂಡಾರ, ಧಾರವಾಡ.

೩. ಶ್ರೀ ಶಂಕರ ಕರ್ಣಾಟಕ ಪುಸ್ತಕಭಂಡಾರ, ಧಾರವಾಡ.

೪. ಮ॥ ರಾ॥ ಪ್ಯಾಟಿ ಶಾಮರಾವ್, ಪುಸ್ತಕ ವ್ಯಾಪಾರಿಗಳು, ಬೆಳಗಾವಿ.

೫. ಸಾಹಿತ್ಯಭಂಡಾರ, ಹುಬ್ಬಳ್ಳಿ.

೬. ಬಾಲಸಾಹಿತ್ಯ ಮಂಡಲ, ಮಂಗಳೂರು.

೭. ಯು. ಆರ್. ಶಣೈ ಆಂಡ್ ಸನ್ಸ್, ಮಂಗಳೂರು.

೮. ಕರ್ಣಾಟಕ ಸಂಘ, ಶಿವಮೊಗ್ಗ.

ಮೈಸೂರು ವಿಶ್ವವಿದ್ಯಾನಿಲಯ

ಪ್ರಚಾರಪುಸ್ತಕಮಾಲೆ - ೨೮

# ಪಾಶ್ಚಾತ್ಯ ರಾಜಕೀಯತತ್ವಗಳು

ಎಂ. ಯಾಮುನಾಚಾರ್ಯ, ಎಂ.ಎ.



ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

ಮೈಸೂರು

೧೯೪೧

# ಮುನ್ನುಡಿ

ಮೈಸೂರು ವಿಶ್ವವಿದ್ಯಾನಿಲಯದ ಮೊದಲನೆಯ ಚಾನ್ಸಲರವರಾದ ಆಳಿದ ಮಹಾಸ್ವಾಮಿಯವರಾದ ಶ್ರೀ ಕೃಷ್ಣರಾಜ ಒಡೆಯರ್ ಬಹದೂರ್ ಅವರು ಮೊದಲನೆಯ ಸೆನೆಟ್ ಸಭೆಯ ಪ್ರಾರಂಭೋತ್ಸವದ ಭಾಷಣದಲ್ಲಿಯೂ, ಪುನಃ ಮೊದಲನೆಯ ಕಾನ್ವೊಕೇಷನ್ ಮಹೋತ್ಸವದ ಭಾಷಣದಲ್ಲಿಯೂ ವಿಶ್ವವಿದ್ಯಾನಿಲಯದ ಪಾಲಿಗೆ ಹಲವು ಕರ್ತವ್ಯಗಳನ್ನು ಅಪ್ಪಣೆಮಾಡಿದರು. ಅವುಗಳಲ್ಲಿ ವಿಶೇಷವಾದವು ಇವೆರಡು: ಒಳ್ಳೆಯ ಕನ್ನಡದಲ್ಲಿ ಬರೆದ ಪುಸ್ತಕಗಳ ಪ್ರಕಟನೆ, ಹಾಗೂ ಕನ್ನಡ ಸಾಹಿತ್ಯಕ್ಕೆ ಪ್ರೋತ್ಸಾಹ. ಮತ್ತು ಶ್ರೀಮನ್ಮಹಾರಾಜರವರ ಪ್ರಜೆಗಳಲ್ಲಿ ಯಾರು ಕಾರಣಾಂತರಗಳಿಂದ ಕ್ರಮಬದ್ಧವಾದ ಶಿಕ್ಷಣ ಶಿಸ್ತುಗಳಲ್ಲಿ ಭಾಗವಹಿಸಿ ಪರೀಕ್ಷೆಗಳಿಗೆ ಕೂಡಲು ಶಕ್ತರಲ್ಲವೋ ಅಂಥವರಲ್ಲಿ ಜ್ಞಾನಪ್ರಸಾರ ಮಾಡುವುದು; ಅಲ್ಲದೆ ಮೈಸೂರು, ಬೆಂಗಳೂರು ಈ ಎರಡು ಹಿರಿಯ ಪಟ್ಟಣಗಳಲ್ಲಿ ದೊರಕುವ ವಿದ್ಯಾಭ್ಯಾಸಾನುಕೂಲ್ಯಗಳನ್ನು ಪಡೆದಿಲ್ಲದ, ಸಂಸ್ಥಾನದ ದೂರ ಪ್ರದೇಶಗಳಲ್ಲಿ ವಾಸಿಸುವ ಜನರಲ್ಲಿ ಉಚ್ಚ ವರ್ಗದ ಸಂಸ್ಕೃತಿಯನ್ನು ಹರಡುವುದು.

ವಿಶ್ವವಿದ್ಯಾನಿಲಯವು ಸ್ಥಾಪಿತವಾದಂದಿನಿಂದಲೂ ಈ ಎರಡು ಮುಖ್ಯ ಧ್ಯೇಯಗಳನ್ನು ತನ್ನ ಮುಂದೆ ತಪ್ಪದೆ ನಿಲ್ಲಿಸಿಕೊಂಡಿದೆ. ಅದರ ಕನ್ನಡ ಪ್ರಕಟನ ಶಾಖೆಯು ಕೆಲವು ಪ್ರಸಿದ್ಧ ಹಳಗನ್ನಡ ಕಾವ್ಯಗಳನ್ನು ಎಚ್ಚರಿಕೆಯಿಂದ ಪರಿಷ್ಕರಿಸಿ ಅಚ್ಚುಹಾಕಿಸಿದೆ: ಅಲ್ಲದೆ, ಸಾಹಿತ್ಯ ವಿಜ್ಞಾನ ವಿಷಯಗಳನ್ನು ಕುರಿತ ಕೆಲವು ಲಘು ಪುಸ್ತಕಗಳನ್ನೂ ಹೊರತಂದಿದೆ. ಪ್ರಚಾರೋಪನ್ಯಾಸ ಸಮಿತಿಯವರು ಸಂಸ್ಥಾನದ ಎಲ್ಲ ಭಾಗಗಳ ಅನೇಕ ಕೇಂದ್ರಗಳಲ್ಲಿ ಹೆಚ್ಚಾಗಿ ಕನ್ನಡದಲ್ಲಿಯೇ ಉಪನ್ಯಾಸಗಳನ್ನು ಏರ್ಪಡಿಸುತ್ತಿದ್ದಾರೆ.

ಇತ್ತೀಚೆಗೆ ಒಂದು ಫಲದಾಯಕವಾದ ಕಾರ್ಯಕ್ರಮ ಬೆಳೆದು ಬರುತ್ತಿದೆ. ವಿಷಯ ಒಂದೊಂದಕ್ಕೆ ಒಂದೊಂದರಂತೆ ಬಿಡಿ ಉಪನ್ಯಾಸ

ವನ್ನು ಕೊಡಿಸುವುದರ ಜೊತೆಗೆ, ವಿಶ್ವವಿದ್ಯಾನಿಲಯದ ಅಧ್ಯಾಪಕ ಸಂಘದ ಸಹಕಾರದಿಂದ ಸಂಸ್ಕೃತಿ ಸಪ್ತಾಹಗಳೆಂದು ಈಗಾಗಲೇ ಕರೆಯಲ್ಪಡುತ್ತಿರುವ ಉಪನ್ಯಾಸಮಾಲೆಗಳನ್ನು ಇಡಿಸಲಾಗುತ್ತಿದೆ. ಒಂದೇ ಊರಿನಲ್ಲಿ ಐದಾರು ದಿನ ಭಾಷಣ ಕಾವ್ಯವಾಚನ ಸಂಗೀತಾದಿಗಳು ಜರುಗುತ್ತವೆ; ಉಪನ್ಯಾಸಗಳು ಸಾಹಿತ್ಯ ವಿಜ್ಞಾನ ಸಮಾಜವೆಲ್ಲಕ್ಕೂ ಸಂಬಂಧಿಸಿರುತ್ತವೆ. ಈ ಸಪ್ತಾಹಗಳು ನೆರವೇರಿದ ದೊಡ್ಡಬಳ್ಳಾಪುರ, ದಾವಣಗೆರೆ, ಕೋಲಾರ ಮುಂತಾದ ಎಲ್ಲ ಕಡೆಗಳಿಂದಲೂ ಅವಕ್ಕೆ ಬಹಳ ಮನ್ನಣೆ ದೊರೆತಿದೆ.

ಈಗ ಅತಿ ಹೊಸದಾದ ಏರ್ಪಾಡಾವುದೆಂದರೆ: ಒಂದೆರಡು ಊರುಗಳನ್ನು ಆರಿಸಿಕೊಂಡು, ಅಲ್ಲಿಗೆ ಒಂದು ವರ್ಷದಲ್ಲಿ ಹಲವು ಬಾರಿ ಹೋಗಿ, ಕೆಲವು ವಿಷಯಗಳಲ್ಲಿ ಒಂದೊಂದನ್ನೂ ಕುರಿತು ನಾಲ್ಕಾರು ಉಪನ್ಯಾಸಗಳನ್ನು ಹೇಳುವ ಯೋಜನೆ. ಅದರಿಂದ ಆ ಊರುಗಳ ಜನರಿಗೆ ಅನಲ್ಪಕಾಲ ಎಡೆಬಿಡದೆ ಜ್ಞಾನಬೋಧೆ ಸಿಕ್ಕುವುದು. ಪ್ರತ್ಯಕ್ಷ ಕೇಳಿ ಉಪಯೋಗ ಪಡೆದ ಸಭಿಕರ ಗುಂಪಿನಿಂದ ಆಚೆಗೂ ಕೂಡ ಈ ಭಾಷಣಮಾಲೆಗಳ ಪ್ರಯೋಜನ ಹರಡಲೆಂಬ ಉದ್ದೇಶದಿಂದ ಅವುಗಳನ್ನು ಈ ರೀತಿ ಚಿಕ್ಕ ಹೊತ್ತಗೆಗಳಾಗಿ ಪ್ರಕಟಿಸಿದೆ.

ಆಳಿದ ಘನ ಪ್ರಭುಗಳವರು ನಮ್ಮ ವಿಶ್ವವಿದ್ಯಾನಿಲಯಕ್ಕೆ ಎರಡು ಪವಿತ್ರ ಕರ್ತವ್ಯಗಳನ್ನು ನೇಮಿಸಿದರಷ್ಟೆ: ಸುಲಭ ಸಮಂಜಸ ಕನ್ನಡದಲ್ಲಿ ರಚಿಸಿದ ಗ್ರಂಥಗಳ ಪ್ರಕಟನೆ; ಜನತೆಯಲ್ಲಿ ಉತ್ತಮ ಬಗೆಯ ಸಂಸ್ಕೃತಿಯ ಪ್ರಸಾರ. ಆ ಎರಡುಕರ್ತವ್ಯಗಳನ್ನೂ ಈ ಮಾರ್ಗವಾಗಿ ಒಂದೇಸಾರಿ ಸಾಧಿಸಬಹುದೆಂಬುದೇ ಹೀಗೆ ಉಪನ್ಯಾಸಗಳನ್ನು ಕೊಟ್ಟು ಲಘು ಪುಸ್ತಕಗಳನ್ನು ಸಿದ್ಧಮಾಡಿದವರ ನಿರೀಕ್ಷೆ ಮತ್ತು ಹೆಬ್ಬಯಕೆ.

ವಿಶ್ವವಿದ್ಯಾನಿಲಯ, ಮೈಸೂರು,
೧೫—೮—೧೯೪೦.

**ಎನ್. ಎಸ್. ಸುಬ್ಬರಾವ್**

# ಪೀಠಿಕೆ

“ ಪ್ರಜೆಗಳ ಹಕ್ಕುಬಾಧ್ಯತೆಗಳು ”, “ ಸರ್ಕಾರದ ಕರ್ತವ್ಯ”, “ ಸ್ವಾತಂತ್ರ್ಯದ . ಹೋರಾಟ ”, “ ಪ್ರಜಾಪ್ರಭುತ್ವ ” ಮೊದಲಾದ ರಾಜಕೀಯ ಉದ್ಘೋಷಗಳು ಇಂದು ಎಲ್ಲ ಕಡೆಯಿಂದಲೂ ಕೇಳಿಬರುತ್ತಿವೆ. ವೃತ್ತಪತ್ರಿಕೆಗಳಲ್ಲೂ ಪ್ರಜಾಪ್ರತಿನಿಧಿ ಸಭೆಗಳಲ್ಲೂ ವಿದ್ಯಾರ್ಥಿಗಳ ಚರ್ಚಾಕೂಟಗಳಲ್ಲೂ ಸಾರ್ವಜನಿಕ ಸಭೆಗಳಲ್ಲೂ ಈ ಮಾತುಗಳನ್ನು ಪದೇ ಪದೇ ಕೇಳುತ್ತಿರುತ್ತೇವೆ. ಆದರೂ ಈ ಮಾತುಗಳಲ್ಲಡಗಿರುವ ತತ್ವಗಳನ್ನು ಕುರಿತು ಎಷ್ಟು ಜನರು ಆಲೋಚನೆಮಾಡುವರೆಂಬುದನ್ನು ವಿಚಾರ ಮಾಡಿದರೆ ಅಂಥವರ ಸಂಖ್ಯೆ ಬಹಳ ಕಡಮೆ ಎಂದೇ ಹೇಳಬೇಕಾಗುವುದು. ಎಲ್ಲರಿಗೂ ಈ ವಿಷಯಗಳಲ್ಲಿ ಒಂದು ಹೊಸ ಆಸಕ್ತಿ ಇರುವುದೇನೋ ಸ್ಪಷ್ಟವಾಗಿದೆ. ಅದಕ್ಕೆ ತಕ್ಕಂತೆ ಇವುಗಳನ್ನು ಕುರಿತು ನಿರ್ದಿಷ್ಟವಾದ ತಿಳಿವಳಿಕೆಯೂ ಜನರಿಗೆ ಇರಬೇಕಾದದ್ದು ಈಗ ಎಷ್ಟು ಅಗತ್ಯವೆಂಬುದನ್ನು ಒತ್ತಿ ಹೇಳಬೇಕಾಗಿಲ್ಲ. ಈ ವಿಚಾರಗಳಲ್ಲಿ ಸರಿಯಾದ ತಿಳಿವಳಿಕೆ ಪಡೆಯದೆ ರಾಜಕೀಯ ಕಾರ್ಯಕ್ಷೇತ್ರಕ್ಕೆ ನುಗ್ಗುವುದರಿಂದ ಅನೇಕ ದುಷ್ಪರಿಣಾಮಗಳು ಉಂಟಾಗಿವೆ. ಪ್ರತಿನಿಧಿ ಸಭೆಗಳಿಗೆ ಚುನಾವಣೆ ನಡೆಯಬೇಕಾದಾಗ ಚುನಾವಣೆಯ ಕ್ಷೇತ್ರಗಳಿಗೆ ತಂಡ ತಂಡವಾಗಿ ಬರುವ ಜನಸಾಮಾನ್ಯಕ್ಕೆ ಕೂಡ ಇಂತಹ ತಿಳಿವಳಿಕೆ ಸ್ವಲ್ಪಮಟ್ಟಿಗಾದರೂ ಇರಬೇಕಾದುದು ಆವಶ್ಯಕ. ಇದು ಸಾಧ್ಯವಾಗಬೇಕಾದರೆ ನಮ್ಮ ಜನರ ವಿದ್ಯೆಯ ಮಟ್ಟವು ಹೆಚ್ಚಬೇಕು. ಇದಷ್ಟೇ ಸಾಲದು. ರಾಜಕೀಯ ವಿಷಯಗಳಲ್ಲಿ ಅವರಿಗೆ ಹೆಚ್ಚು ತಿಳಿವಳಿಕೆ ಕೊಡುವ ಸಂಸ್ಥೆಗಳೂ ಪ್ರಚಾರ ಕಾರ್ಯವೂ ಆವಶ್ಯಕ.

ಈಗ ನಮ್ಮ ಜನರಲ್ಲಿ ರಾಜಕೀಯ ವಿಚಾರವಾಗಿ ಅಲ್ಪ ಸ್ವಲ್ಪ ಜಾಗೃತಿಯುಂಟಾಗಿರುವುದಕ್ಕೆ ಪಾಶ್ಚಾತ್ಯ ರಾಜಕೀಯ ತತ್ವಗಳು ಬಹುಮಟ್ಟಿಗೆ ಕಾರಣವಾಗಿವೆ. ಆದುದರಿಂದ ನಮ್ಮ ಜೀವನದಲ್ಲಿ ಅತಿ ಪರಿಣಾಮಕಾರಿಯಾಗುತ್ತಿರುವ ಪಾಶ್ಚಾತ್ಯ ರಾಜಕೀಯ ತತ್ವಗಳು ಹುಟ್ಟಿದುದು ಹೇಗೆ, ಬೆಳೆದುದು ಹೇಗೆ ಎಂಬುದನ್ನು ತಿಳಿಯುವ ಕುತೂಹಲ ನಮ್ಮ ಜನರಿಗೆ ಇರುವುದು ಸ್ವಾಭಾವಿಕವಾದುದೇ. ಅಂಥವರ ಉಪಯೋಗಕ್ಕಾಗಿ ಈ ಸಣ್ಣ ಪುಸ್ತಕದಲ್ಲಿ ಪ್ರಾಚೀನ ಗ್ರೀಕರ ಕಾಲದಿಂದ ಇಂದಿನವರೆಗೆ ಆಗಿರುವ ರಾಜಕೀಯ ತತ್ವಗಳ ಬೆಳವಣಿಗೆಯನ್ನು ವಿವರಿಸಿದೆ.

ಪಾಶ್ಚಾತ್ಯ ರಾಜಕೀಯ ತತ್ವಗಳನ್ನು ಕುರಿತು ನಾನು ಕೃಷ್ಣರಾಜನಗರದಲ್ಲಿ ಕೊಟ್ಟ ನಾಲ್ಕು ಪ್ರಚಾರ ಉಪನ್ಯಾಸಗಳು ಈ ಪುಸ್ತಕಕ್ಕೆ ಆಧಾರ. ಈ ಉಪನ್ಯಾಸಗಳನ್ನು ಪುಸ್ತಕದ ರೂಪಕ್ಕೆ ತರಲು ಉಪಯುಕ್ತವಾದ ಸಲಹೆಗಳನ್ನು ಕೊಟ್ಟು ಉಪಕಾರಮಾಡಿದ ನನ್ನ ಮಿತ್ರರಾದ ಶ್ರೀ ಜಿ. ಹನುಮಂತ ರಾಯರಿಗೂ ಸಂಪಾದಕೀಯ ಮಂಡಲಿಯ ಇತರ ಸದಸ್ಯರಿಗೂ ನನ್ನ ವಿಶೇಷ ವಂದನೆಗಳು.

**ಎಂ. ಯಾಮುನಾಚಾರ್ಯ.**

# ವಿಷಯಾನುಕ್ರಮಣಿಕೆ

# ಪಾಶ್ಚಾತ್ಯ ರಾಜಕೀಯತತ್ವಗಳು

## ೧. ಗ್ರೀಕರ ರಾಜಕೀಯ ತತ್ವಗಳು

ಪ್ರಾಚೀನ ಗ್ರೀಸು ಪಾಶ್ಚಾತ್ಯ ಸಂಸ್ಕೃತಿಗೆ ಮಾತೃಸ್ಥಾನ. ಗ್ರೀಕರ ಸಾಹಿತ್ಯ, ಕಲೆ, ವಿಜ್ಞಾನ, ತರ್ಕ, ತತ್ವಶಾಸ್ತ್ರ - ಇವೆಲ್ಲ ವೊಂದೂ ಈಗಲೂ ಪಾಶ್ಚಾತ್ಯರ ಜೀವನದಲ್ಲಿ ಪೂಜ್ಯಸ್ಥಾನ ವನ್ನು ಪಡೆದಿವೆ. ಗ್ರೀಕರ ರಾಜಕೀಯ ಚರಿತ್ರೆಯೂ ಅವರ ರಾಜಕೀಯ ತತ್ವಗ್ರಂಥಗಳೂ ಪಾಶ್ಚಾತ್ಯ ವಿಶ್ವವಿದ್ಯಾನಿಲಯ ಗಳಲ್ಲೂ ನಮ್ಮ ವಿಶ್ವವಿದ್ಯಾನಿಲಯಗಳಲ್ಲೂ ಪಠ್ಯವಿಷಯಗ ಳಾಗಿವೆ. ನಮ್ಮ ವಿಶ್ವವಿದ್ಯಾನಿಲಯದಲ್ಲಿ, ರಾಷ್ಟ್ರತತ್ವ ಗ್ರಂಥಗಳಲ್ಲಿ ಜಗದ್ವಿಖ್ಯಾತವಾದ ಪ್ಲೇಟೋವಿನ " ರಿಪಬ್ಲಿಕ್ " ಎಂಬುದು ತತ್ವಶಾಸ್ತ್ರದ ಒಂದು ಪಠ್ಯಪುಸ್ತಕವಾಗಿದೆ. ರಾಜ ಕೀಯ ವ್ಯವಹಾರಗಳಲ್ಲಿ ಪ್ರಾಚೀನ ಗ್ರೀಕರಿಗೆ ಇದ್ದಷ್ಟು ಆಸಕ್ತಿ ಬಹುಶಃ ಈಗಿನ ಅಥವಾ ಹಿಂದಿನ ಇನ್ನು ಯಾವ ಜನಾಂಗಕ್ಕೂ ಇರಲಿಲ್ಲ. ದಿನ ಬೆಳಗಾದರೆ ಅವರು ರಾಜಕೀಯ ಸಭೆಗೆ ಹೋಗಿ ಅಲ್ಲಿನ ಕಾರ್ಯಕಲಾಪಗಳಲ್ಲಿ ಭಾಗವಹಿಸುವುದು ಅವರ ನಿತ್ಯಕರ್ಮವಾಗಿತ್ತು.

ಪ್ರತಿಯೊಬ್ಬ ಗ್ರೀಕನೂ ಹೀಗೆ ರಾಜಕೀಯದಲ್ಲಿ ನೇರವಾಗಿ ತಾನೇ ಪಾತ್ರವಹಿಸುವುದು ತನ್ನ ಆಜನ್ಮ ಹಕ್ಕೆಂದು ತಿಳಿದಿ ದ್ದನು. ಅದಲ್ಲದೆ ತನ್ನ ರಾಜಕೀಯ ಕರ್ತವ್ಯವನ್ನು ಅತಿ ಹೆಮ್ಮೆಯಿಂದ ನಡೆಸುತ್ತಿದ್ದನು. ಹೀಗೆ ನೇರವಾಗಿ ಪ್ರಜೆಗಳೇ ರಾಜ್ಯಾಡಳಿತದಲ್ಲಿ ಪ್ರಸಕ್ತರಾಗಲು ಸಾಧ್ಯವಾದುದು ಅವರ ರಾಜ್ಯಗಳು ನಗರರಾಜ್ಯಗಳಾಗಿದ್ದುದರಿಂದ. ಆ ನಗರಗಳಲ್ಲಿ ಕೂಡ ಎಲ್ಲರಿಗೂ ಪೌರಹಕ್ಕುಬಾಧ್ಯತೆಗಳಿರಲಿಲ್ಲ. ಆ ನಗರ

ದಲ್ಲೀ ಹುಟ್ಟಿ ಬೆಳೆದ ಗ್ರೀಕನು ಮಾತ್ರ ಪೌರನಾಗಬಹುದಾಗಿತ್ತು. ಆ ನಗರನಿವಾಸಿಗಳಾದ ಸಾವಿರಾರು ಗುಲಾಮರಿಗೂ ಸ್ತ್ರೀಯರಿಗೂ ಪೌರಹಕ್ಕುಬಾಧ್ಯತೆಗಳಿರಲಿಲ್ಲ. ಹೆಂಗಸರು ಗೃಹಕೃತ್ಯವನ್ನೂ ಗುಲಾಮರು ವ್ಯವಸಾಯ ಕೈಗಾರಿಕೆಗಳನ್ನೂ ನೋಡಿಕೊಳ್ಳುತ್ತಿದ್ದುದರಿಂದ ಗ್ರೀಕ್ ಪೌರರು ತಮ್ಮ ಕಾಲವನ್ನು ವ್ಯಾಯಾಮಶಾಲೆಗಳಲ್ಲೂ ರಾಜಕೀಯ ಸಭೆಗಳಲ್ಲೂ ನಿರಾತಂಕವಾಗಿ ಕಳೆಯಲು ಸಾಧ್ಯವಾಯಿತು.

ಗ್ರೀಸಿನ ನಗರ ರಾಷ್ಟ್ರಗಳಲ್ಲಿ ಅತಿ ಪ್ರಸಿದ್ಧವಾದುವು ಅಥೆನ್ಸ್ ಮತ್ತು ಸ್ಪಾರ್ಟ. ಈ ಎರಡು ನಗರರಾಷ್ಟ್ರಗಳ ರಾಜಕೀಯ ಜೀವನವೇ ಪ್ಲೇಟೋವಿನ ಮತ್ತು ಅರಿಸ್ಟಾಟಲನ ರಾಜಕೀಯ ತತ್ತ್ವಗಳಿಗೆ ತಳಹದಿ. ಗ್ರೀಕರ ರಾಷ್ಟ್ರ ತತ್ತ್ವವೆಲ್ಲಾ ಈ ಇಬ್ಬರು ಮಹನೀಯರ ಬರೆವಣಿಗೆಗಳಲ್ಲಿ ಅಡಗಿವೆ. ಇವರಿಬ್ಬರಿಗೂ ಹಲವು ವಿಷಯಗಳಲ್ಲಿ ಭಿನ್ನಾಭಿಪ್ರಾಯಗಳಿದ್ದರೂ ರಾಜ್ಯದ ಸ್ವರೂಪ, ರಾಜ್ಯದ ಗುರಿ—ಇವೆರಡು ವಿಚಾರಗಳಲ್ಲಿ ಮಾತ್ರ ಇವರಿಬ್ಬರೂ ಏಕಾಭಿಪ್ರಾಯವುಳ್ಳವರಾಗಿದ್ದರು. ಗ್ರೀಕರಿಗೆ ರಾಜಕೀಯದಲ್ಲಿ ವಿಶೇಷವಾದ ಆಸಕ್ತಿ ಇದ್ದುದರಿಂದ ಒಂದು ರಾಜ್ಯಕ್ಕೆ ಸೇರಿ ಬದುಕಿ ಬಾಳುವುದೇ ಮಾನವನಿಗೆ ಸಹಜವಾದ ಧರ್ಮವೆಂದು ಎಣಿಸಿದ್ದರು. ರಾಜ್ಯವು ಪ್ರಜೆಯ ಪ್ರಾಣಮಾನಗಳನ್ನು ಕಾಪಾಡಲು ಅವಶ್ಯಕವಲ್ಲದೆ ಅವನು ಉತ್ತಮ ನಾಗರಿಕ ಜೀವನವನ್ನು ಸಾಧಿಸಲು ಅವಶ್ಯಕವೆಂದು ನಂಬಿದ್ದರು. ಗ್ರೀಕರ ಇವೆರಡು ನಂಬಿಕೆಗಳನ್ನು ಪ್ಲೇಟೋ ಮತ್ತು ಅರಿಸ್ಟಾಟಲ್ ಇಬ್ಬರೂ ಮುಖ್ಯ ರಾಜಕೀಯ ತತ್ತ್ವಗಳಾಗಿ ಪ್ರತಿಪಾದಿಸಿದ್ದಾರೆ. ಈ ಎರಡು ನಂಬಿಕೆಗಳು ಅರಿಸ್ಟಾಟಲಿನ ಪ್ರಖ್ಯಾತವಾದ ಎರಡು ವಾಕ್ಯಗಳಲ್ಲಿ ಅಡಗಿವೆ. (೧) "ಮನುಷ್ಯನು

ರಾಜಕೀಯ ಪ್ರಾಣಿ". ರಾಜಕೀಯವು ಮಾನವನ ಉಸಿರು; ಅದನ್ನು ಬಿಟ್ಟು ಅವನು ಬಾಳಲಾಗುವುದಿಲ್ಲ. ರಾಜಕೀಯವನ್ನು ಬಿಟ್ಟ ಮಾನವನೂ ನೀರಿನಿಂದ ಹೊರಬಿದ್ದ ಮೀನೂ ಒಂದೇ. (೨) "ರಾಷ್ಟ್ರವಿರುವುದು ಜೀವವನ್ನು ಕಾಪಾಡುವುದಕ್ಕೇ ಅಲ್ಲ; ಅದು ಇರುವುದು ಉತ್ತಮ ಜೀವನಸಾಧನೆಗಾಗಿ." ಅಂದರೆ ನಮ್ಮ ಆಸ್ತಿಪಾಸ್ತಿಗಳನ್ನು, ಪ್ರಾಣಮಾನಗಳನ್ನು ಕಾಯುವ ಪೋಲೀಸು ಮತ್ತು ನ್ಯಾಯಾಸ್ಥಾನಗಳನ್ನೇರ್ಪಡಿಸುವುದು ಮಾತ್ರವೇ ರಾಷ್ಟ್ರದ ಕೆಲಸವಲ್ಲ; ಜೀವನವನ್ನು ಪೂರ್ಣಗೊಳಿಸುವುದೂ ಉತ್ತಮ ಜೀವನಕ್ಕೆ ಅನುಕೂಲವಾದ ಸಾಧನಗಳನ್ನು ಕಲ್ಪಿಸುವುದೂ ಅದರ ಕರ್ತವ್ಯ. ವ್ಯಕ್ತಿಯು ತನ್ನಲ್ಲಿರುವ ಆಸುರೀವೃತ್ತಿಗಳನ್ನು ತುಳಿದು ತನ್ನಲ್ಲಿಯೇ ಅಡಗಿರುವ ದೈವೀಸಂಪತ್ತನ್ನು ವೃದ್ಧಿಗೊಳಿಸುವ ಜೀವನವೇ ಉತ್ತಮ ಜೀವನ. ಯಾವ ವ್ಯಕ್ತಿಯು ತನ್ನ ಸ್ವಾರ್ಥವನ್ನು ತೊರೆದು ರಾಜ್ಯದ ಹಿತವೇ ತನ್ನದೆಂದು ಭಾವಿಸುವನೋ ಅಂಥವನು ಮಾತ್ರ ಉತ್ತಮ ಜೀವನದ ಕಡೆಗೆ ತಿರುಗುವನು. ಯಾವ ರಾಜ್ಯದಲ್ಲಿ ಸ್ವಾರ್ಥಪರಾರ್ಥಗಳಿಗೆ ಘರ್ಷಣವಿಲ್ಲದೆ ಸಾಮರಸ್ಯ ಉಂಟಾಗಿರುವುದೋ ಆ ರಾಜ್ಯವು ಉತ್ತಮ ರಾಜ್ಯವೆಂಬುವುದರಲ್ಲಿ ಪ್ಲೇಟೋ ಮತ್ತು ಅರಿಸ್ಟಾಟಲರು ಏಕಾಭಿಪ್ರಾಯವುಳ್ಳವರಾಗಿದ್ದಾರೆ. ಉತ್ತಮ ರಾಜ್ಯರಚನೆಯ ವಿಷಯವಾಗಿ ಪ್ಲೇಟೋ ಬರೆದ "ರಿಪಬ್ಲಿಕ್" ಎಂಬ ಗ್ರಂಥವು ಈ ಭಾವಗಳಿಂದ ಪರಿಪ್ಲುತವಾಗಿದೆ.

ಪ್ಲೇಟೋ ರಾಜ್ಯವನ್ನು ಸಜೀವವಾದ ಒಂದು ಶರೀರಕ್ಕೆ ಹೋಲಿಸಿರುವನು. ಶರೀರದಲ್ಲಿ ಬೇರೆ ಬೇರೆ ಅಂಗಗಳಿವೆ. ಪ್ರತಿಯೊಂದು ಅಂಗವೂ ಅದರ ರಚನೆಗೆ ತಕ್ಕ ಕೆಲಸವನ್ನು

ಶರೀರದ ಪೋಷಣೆಗಾಗಿ ಮಾಡುವುದು. ಒಂದು ಅಂಗ ಮಾಡುವ ಕೆಲಸವನ್ನು ಮತ್ತೊಂದು ಅಂಗವು ಮಾಡಲಾರದು. ಒಂದು ಇಂದ್ರಿಯದ ಕೆಲಸವನ್ನು ಮತ್ತೊಂದು ಇಂದ್ರಿಯ ಮಾಡಲಾರದು. ಅಂದರೆ ಅವುಗಳು ಮಾಡುವ ಕೆಲಸ ಅವುಗಳ ಸ್ವಭಾವಸಿದ್ಧವಾದ ರಚನೆಗೆ ಅನುರೂಪವಾಗಿರಬೇಕು. ಪ್ಲೇಟೋನಿನ ಅಭಿಪ್ರಾಯದಲ್ಲಿ ರಾಜ್ಯವೆಂಬ ಶರೀರದಲ್ಲಿಯೂ ಇದೇ ವಿಧವಾದ ವಿಪಾಡು ಇರಬೇಕು. ರಾಜ್ಯದ ಅಂಗಗಳಾದ ವ್ಯಕ್ತಿಗಳು ಆರೋಗ್ಯದಲ್ಲಿಯಲ್ಲಿರಬೇಕಾದರೆ ರಾಜ್ಯಶರೀರವು ಆರೋಗ್ಯವಾಗಿರಬೇಕು. ವ್ಯಕ್ತಿಗಳು ರಾಜ್ಯದ ಒಟ್ಟಿನ ಆರೋಗ್ಯಕ್ಕಾಗಿಯೂ ಹಿತಕ್ಕಾಗಿಯೂ ತಮ್ಮ ಸ್ವಭಾವಕ್ಕೆ ಅನುಗುಣವಾದ ಕೆಲಸವನ್ನು ಕೈಕೊಳ್ಳಬೇಕು. ವ್ಯಕ್ತಿಗಳು ಮೂರು ವಿಧವಾದ ಸ್ವಭಾವವುಳ್ಳವರಾಗಿರುತ್ತಾರೆ. ನಮಗೆ ಪರಿಚಯವಿರುವ ಮಾತುಗಳಲ್ಲಿ ಹೇಳಬೇಕಾದರೆ ಈ ಮೂರು ಜಾತಿಯ ಸ್ವಭಾವವುಳ್ಳವರನ್ನು ಸಾತ್ವಿಕರು, ರಾಜಸರು ಮತ್ತು ತಾಮಸರೆಂದು ಕರೆಯಬಹುದು. ಮೊದಲನೆ ಜಾತಿಯವರು ಚಿನ್ನದಂಥ ಸತ್ವಗುಣದಿಂದಲೂ, ಎರಡನೆಯ ಜಾತಿಯವರು ಬೆಳ್ಳಿಯಂಥ ರಜೋಗುಣದಿಂದಲೂ, ಮೂರನೆಯವರು ಕಬ್ಬಿಣದಂಥ ತಮೋಗುಣದಿಂದಲೂ ಕೂಡಿದವರಾಗಿರುತ್ತಾರೆ. ಚಿನ್ನದಂಥ ಆತ್ಮವಿರುವವನಲ್ಲಿ ಜ್ಞಾನಶಕ್ತಿ ಪ್ರಬಲವಾಗಿದೆ; ಬೆಳ್ಳಿಯಂಥ ಆತ್ಮವುಳ್ಳವರಲ್ಲಿ ಧೈರ್ಯಸ್ಥೈರ್ಯಾದಿಗುಣಗಳೂ ಕಾರ್ಯನಿರ್ವಾಹಕಶಕ್ತಿಯೂ ಪ್ರಬಲವಾಗಿವೆ; ಕಬ್ಬಿಣದಂಥ ಆತ್ಮವುಳ್ಳವರಲ್ಲಿ ಇಚ್ಛಾಶಕ್ತಿ ಪ್ರಬಲವಾಗಿದೆ. ಅವರ ಸ್ವಭಾವಗಳಿಗೆ ಅನುಸಾರವಾದ ಕರ್ತವ್ಯಗಳನ್ನು ಅವರಿಗೆ ನಿಯಮಿಸಿದರೆ ರಾಜ್ಯವು ಸುಸೂತ್ರವಾಗಿ ನಡೆಯಬಲ್ಲುದು. ಅವರವರ

ಕರ್ಮಗಳಲ್ಲಿ ಅವರು ನಿರತರಾಗುವುದರಿಂದ ಅವರಿಗೂ ಕ್ಷೇಮ, ರಾಜ್ಯಕ್ಕೂ ಕ್ಷೇಮ; ಇದರಿಂದ ಒಟ್ಟು ಸಮಾಜದಲ್ಲಿ ನ್ಯಾಯ ಸ್ಥಾಪನೆಯೂ ಆಗುತ್ತದೆ.

ಹೀಗೆ ಒಬ್ಬೊಬ್ಬರೂ ತಮ್ಮ ತಮ್ಮ ಗುಣಗಳಿಗೆ ತಕ್ಕಂತೆ ಸಮಾಜಸೇವೆ ಮಾಡಬೇಕು ಎಂಬುದನ್ನು ಒಪ್ಪಿದರೆ ತತ್ವಜ್ಞರು ರಾಜರಾಗಬೇಕಾಗುವುದು. ತಿಳಿವಳಿಕೆ ಇರುವವರು, ತತ್ವಜ್ಞಾನಿಗಳಾದವರು ರಾಜ್ಯಾಡಳಿತಸೂತ್ರಗಳನ್ನು ಹಿಡಿಯಬೇಕು—ಅಂದರೆ ರಾಜರಾಗಬೇಕು. ರಾಜ್ಯದ ಆಡಳಿತವನ್ನು ರಾಗದ್ವೇಷಗಳಿಗೆ ಈಡಾಗದ ವಿವೇಕಿಗಳ ಕೈಗೆ ಒಪ್ಪಿಸುವುದು ಅತ್ಯುತ್ತಮವಾದ ಏರ್ಪಾಡು. ಸಾತ್ವಿಕಸ್ವಭಾವದವರಲ್ಲೇ ಈ ವಿವೇಕವಿರಬಲ್ಲುದು. ಆಡಳಿತಕ್ಕೆ ತಕ್ಕ ಜ್ಞಾನನಿಷ್ಠೆ ಕರ್ಮನಿಷ್ಠೆಗಳು ಇವರಲ್ಲಿ ಇರಬಲ್ಲುವು. ಇವರು ಜ್ಞಾನದಿಂದಲೂ ಅನುಷ್ಠಾನದಿಂದಲೂ ಶ್ರೇಷ್ಠರೆನಿಸಿಕೊಳ್ಳುವರು. ಇವರ ಆಚರಣೆ ಇತರ ಜನರಿಗೆ ಮೇಲುಪಂಕ್ತಿಯಾಗಿಯೂ ಇರುತ್ತದೆ. ತತ್ವಾನ್ವೇಷಣ ಇವರ ಸ್ವಭಾವಸಿದ್ಧವಾದ ಕರ್ಮ. ಪೂರ್ವಾಪರಗಳನ್ನು ಯೋಚಿಸಿ ತತ್ವಗಳನ್ನು ನಿರೂಪಿಸಿ ಶ್ರೇಯೋಮಾರ್ಗದಲ್ಲಿ ಸಾಮಾನ್ಯಜನರನ್ನು ಕೈಹಿಡಿದು ನಡಸುವ ಕೆಲಸ ಇವರದಾಗಿರುತ್ತದೆ. ಇವರಲ್ಲಿರುವ ಸಹಜವಾದ ಯೋಗ್ಯತೆಯನ್ನು ಕಂಡು ಜನರು ಇವರನ್ನು ತಮ್ಮ ಹಿತಚಿಂತಕರಾದ ನಾಯಕರೆಂದು ಅಂಗೀಕರಿಸುವರು. ಇಂತಹವರ ಪ್ರಭುತ್ವವೇ ಶ್ರೇಷ್ಠವಾದ ಪ್ರಭುತ್ವ. ಇಂಥ ತತ್ವಜ್ಞಾನಿಗಳು ಪ್ರಭುಗಳಾಗುವವರೆಗೂ ರಾಜಕೀಯ ಜೀವನದಲ್ಲಿರಬೇಕಾದ ಭಾವಶುದ್ಧಿ ಸಾಧ್ಯವಾಗಲಾರದು. ಇದು ಪ್ಲೇಟೋವಿನ ಮೊದಲನೆಯ ರಾಜಕೀಯ ಧ್ಯೇಯ.

ಸಮಾಜದಲ್ಲಿ ಇಂಥ ಸಾತ್ತ್ವಿಕ ಸ್ವಭಾವದವರು ಅತಿ ವಿರಳ. ಎಳೆಯ ವಯಸ್ಸಿನಲ್ಲಿದ್ದಾಗಲೇ ಅಂಥವರನ್ನು ಹುಡುಕಿ ಆರಿಸಬೇಕು. ದನಗಳಲ್ಲಿ ಒಳ್ಳೆ ಜಾತಿಯ ರಾಸುಗಳನ್ನು ಆಯು ವಂತೆಯೂ, ಕುದುರೆಗಳಲ್ಲಿ ಒಳ್ಳೆಯ ಲಕ್ಷಣಗಳುಳ್ಳವುಗಳನ್ನು ಆಯುವಂತೆಯೂ ಹುಟ್ಟಿದ ಮಕ್ಕಳಲ್ಲಿ ಸಾತ್ತ್ವಿಕ ಸ್ವಭಾವ ದವರನ್ನು ಹುಡುಕಿ ಆಯಬೇಕು. ಹಾಗೆ ಅವರನ್ನು ಆಯ್ದು ತೆಗೆದು ಅವರಿಗೆ ಅತ್ಯುತ್ತಮವಾದ ಶಿಕ್ಷಣವನ್ನು ಕೊಡಬೇಕು. ಈ ಶಿಕ್ಷಣದಲ್ಲಿ ಶಾರೀರಕ, ಮಾನಸಿಕ, ಆಧ್ಯಾತ್ಮಿಕ ಅಂಶಗಳು ಹಾಸು ಹೊಕ್ಕಾಗಿರುವಂತೆ ಹೆಣೆದುಕೊಂಡಿರಬೇಕು. ಹೀಗೆ ತರ ಬೇತು ಮಾಡಿದ ಸಾತ್ತ್ವಿಕ ಪ್ರಜೆಗಳನ್ನು ಪ್ರಭುತ್ವ ಸ್ಥಾನದಲ್ಲಿ ಕುಳ್ಳಿರಿಸಬೇಕು. ಇವರ ಜೀವನವು ರಾಜ್ಯಕ್ಕಾಗಿಯೇ ಮೀಸ ಲಾಗಿರಬೇಕಾದುದರಿಂದ ಇವರಿಗೆ ಸ್ವಂತ ಸಂಸಾರವಿರಬಾರದು. ಹೆಂಡತಿ ಮಕ್ಕಳನ್ನು ಸಾಕುವ ಜವಾಬ್ದಾರಿಯಾಗಲಿ, ಅವರ ವಿಷಯವಾಗಿ ಮಮತೆಯಾಗಲಿ ಇಲ್ಲದೆ ತಮ್ಮ ರಾಜಕೀಯ ದಲ್ಲೇ ಅವರು ನಿರತರಾಗಿರಬೇಕು. ಇಂಥವರಲ್ಲಿ ಸ್ವಾಭಾವಿಕ ವಾಗಿ ಇರುವ ಸತ್ತ್ವಗುಣ ಅವರ ತಲೆಗೇ ನಷ್ಟವಾಗದಂತೆ ಉಳಿಸಿಕೊಳ್ಳಲು ಅವರು ತಮಗೆ ಅನುಗುಣರಾದ ಸ್ತ್ರೀಯರ ಮೂಲಕ ಸಂತಾನವನ್ನು ಪಡೆಯುವ ಏರ್ಪಾಡುಮಾಡ ಬೇಕಾದುದು ಸಮಾಜದ ಕರ್ತವ್ಯ. ಗಂಡಸರಲ್ಲಿ ಉತ್ತಮ ರಾದವರನ್ನು ಬಾಲ್ಯದಲ್ಲೇ ಹುಡುಕಿ ಆರಿಸುವಂತೆ, ಹೆಣ್ಣು ಮಕ್ಕಳಲ್ಲೂ ಸ್ತ್ರೀರತ್ನಗಳನ್ನು ಆಯ್ದು ಅವರಿಗೆ ಯೋಗ್ಯವಾದ ದೈಹಿಕ ಮತ್ತು ಮಾನಸಿಕ ಶಿಕ್ಷಣವನ್ನು ಕೊಟ್ಟು ಸತ್ಸಂತಾನ ಪಾತ್ರರನ್ನಾಗಿ ಮಾಡಬೇಕು. ಅವರು ಕೂಡ ಸಾತ್ತ್ವಿಕರಾದ ಪುರುಷರಂತೆಯೇ ಬ್ರಹ್ಮಚರ್ಯಾನಿಷ್ಠರಾಗಿ ಇರಬೇಕು. ಪ್ರಭು

ಪಟ್ಟಕ್ಕೆ ಆರಿಸಲ್ಪಟ್ಟ ಸಾತ್ವಿಕಶ್ರೇಷ್ಠರು ಕ್ಲಿಪ್ತವಾದ ಕಾಲದಲ್ಲಿ ಕೇವಲ ಕರ್ತವ್ಯದೃಷ್ಟಿಯಿಂದ ಈ ಸ್ತ್ರೀಯರ ಸಂಗವನ್ನು ಮಾಡಿ ಗರ್ಭಾದಾನಮಾಡಬೇಕು. ತಮ್ಮ ಕರ್ತವ್ಯವನ್ನು ಮಾಡಿದಮೇಲೆ ಇವರು ಪುನಃ ಬ್ರಹ್ಮಚಾರಿಗಳಂತೆ ಇರಬೇಕು. ಇವರ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳನ್ನು ರಾಷ್ಟ್ರದ ಅಮೂಲ್ಯವಾದ ಸಂಪತ್ತೆಂದು ಭಾವಿಸಿ ಅವರನ್ನು ರಾಷ್ಟ್ರದ ವೆಚ್ಚದಿಂದಲೇ ಬೆಳಸಬೇಕು. ಈ ವಿಚಾರದಲ್ಲಿ ಪ್ಲೇಟೋ ಇಂದಿನ ಸತ್ಸಂತಾನ ಶಾಸ್ತ್ರಕ್ಕೆ (Eugenics) ಜನ್ಮದಾತನೆಂದು ಹೇಳಬಹುದು.

ಕಾಮಜೀವನದಲ್ಲಿ ನಡೆದುಕೊಳ್ಳುವಂತೆಯೇ ಆಹಾರವಿಹಾರಗಳಲ್ಲಿ ಕೂಡ ಸಂಯಮದಿಂದ ನಡೆದುಕೊಳ್ಳಬೇಕೆಂದು ಈ ಮಾನವಶ್ರೇಷ್ಠರ ನಿಯಮ. "ಯುಕ್ತಾಹಾರ ವಿಹಾರಸ್ಯ ಯುಕ್ತ ಚೇಷ್ಟಸ್ಯ ಕರ್ಮಸು ಯುಕ್ತಸ್ವಪ್ನಾವಬೋಧಸ್ಯ" ಎಂಬ ಭಗವದ್ಗೀತೆಯ ವಾಕ್ಯವು ಇವರ ಜೀವನ ನಿಯಮಗಳನ್ನು ಚೆನ್ನಾಗಿ ವ್ಯಕ್ತಪಡಿಸುತ್ತದೆ. ಇವರಿಗೆ ಹೊತ್ತಿಗೆ ಸರಿಯಾಗಿ ಆರೋಗ್ಯಕರವಾದ ಕ್ಲಿಪ್ತವಾದ ಆಹಾರವನ್ನು ಒದಗಿಸಿಕೊಡುವುದು ಸಮಾಜದ ಕರ್ತವ್ಯ. ಸಮಾಜವು ನೀಡುವ ಭಿಕ್ಷೆಯಿಂದ ಇವರು ಜೀವನ ನಡಸಬೇಕು. ಇದಿಷ್ಟು ಸಾತ್ವಿಕಜೀವಿಗಳ ಮಾತಾಯಿತು.

ಇನ್ನು ರಾಜಸರು ಮಾಡಬೇಕಾದುದೇನು? ರಾಜ್ಯವನ್ನು ಶತ್ರುಗಳ ಭಯದಿಂದ ರಕ್ಷಿಸುವುದು ಇವರ ಕರ್ತವ್ಯ. ಯುದ್ಧ ಮಾಡಲು ಬೇಕಾದ ಮನೋವೃತ್ತಿ ಇವರಲ್ಲಿರಬಲ್ಲುದು. ಇವರಿಗೆ ಬೇಕಾದ ಮುಖ್ಯ ಶಿಕ್ಷಣ ಯೋಧಶಿಕ್ಷಣ. ಅಂದರೆ ಅವರಿಗೆ ಕೊಡುವ ವಿದ್ಯೆ ಮುಖ್ಯವಾಗಿ ಕ್ಷಾತ್ರವಿದ್ಯೆ.

ಯುದ್ಧ ಸಮಯದಲ್ಲಿ ಇದರ ಉಪಯೋಗ ಅತ್ಯಾವಶ್ಯಕ; ಆದರೆ ಯುದ್ಧವಿಲ್ಲದಿದ್ದಾಗ ಇವರು ಮಾಡಬಹುದಾದ ವೃತ್ತಿಗಳೂ ಅನೇಕವಿವೆ. ಕೃಷಿ, ಪಶುಪಾಲನೆ, ವಾಣಿಜ್ಯ—ಇವೂ ಸಮರ ವೃತ್ತಿಯಂತೆಯೇ ಇವರ ಸ್ವಭಾವಕ್ಕೆ ತಕ್ಕ ವೃತ್ತಿಗಳು.

ಸಾತ್ವಿಕ ಗುಣಗಳುಳ್ಳವರಂತೂ ಅತಿವಿರಳ. ರಾಜಸ ಸ್ವಭಾವದವರ ಸಂಖ್ಯೆ ಅಷ್ಟು ವಿರಳವಲ್ಲ. ಆದರೂ ಎಲ್ಲರಿಗೂ ಈ ಗುಣಗಳಿರುವುವೆಂದು ಹೇಳುವುದಕ್ಕಾಗುವುದಿಲ್ಲ. ಹಾಗಾದರೆ ಈ ಗುಣಗಳಿಲ್ಲದವರ ಪಾಡೇನು ಎಂಬ ಪ್ರಶ್ನೆ ಏಳುವುದು. ಪ್ಲೇಟೋವಿನ ಅಭಿಪ್ರಾಯದಲ್ಲಿ ಇಂಥವರಿಗೂ ಸಮಾಜದಲ್ಲಿ ಒಂದು ಸ್ಥಾನವಿದೆ. ಹೆಚ್ಚು ಕೌಶಲ ಆವಶ್ಯಕವಿಲ್ಲದ ಅನೇಕ ಕೆಲಸಗಳು ಸಮಾಜದಲ್ಲಿ ನಡೆಯಬೇಕಾಗಿದೆ. ಅವನ್ನು ಮಾಡಲು ತಕ್ಕ ವ್ಯವಧಾನವೂ ಸಹನೆಯೂ ಸಾತ್ವಿಕ ರಾಜಸರಿಗೆ ಇಲ್ಲದಿರಬಹುದು. ಬೆಳಗಿನಿಂದ ಸಂಜೆಯವರೆಗೂ ಉಳುವುದು, ಅಗೆಯುವುದು, ಮಣ್ಣು ಕಲ್ಲುಗಳನ್ನು ಹೊರುವುದು—ಇಂಥ ಕೆಲಸಗಳನ್ನು ಮಾಡುವುದರಲ್ಲಿ ತಾಮಸರು ತಮ್ಮ ಕಾಲವನ್ನೆಲ್ಲಾ ವಿನಿಯೋಗಿಸಬಲ್ಲರು. ಇವುಗಳನ್ನು ಮಾಡಲು ಹೆಚ್ಚು ಬುದ್ಧಿಶಕ್ತಿ ಧೈರ್ಯಸ್ಥೈರ್ಯಗಳು ಬೇಡವಾದರೂ ಇವುಕೂಡ ಆರ್ಥಿಕ ದೃಷ್ಟಿಯಿಂದ ಬಹಳ ಮುಖ್ಯವಾದುವೇ. ಇಂಥ ಕ್ರಿಯೆಗಳಲ್ಲಿ ನಿರತರಾಗಲು ಹೆಚ್ಚಿನ ಶಿಕ್ಷಣ ಬೇಕಾಗಿಲ್ಲ. ಸಮಾಜದಲ್ಲಿ ತಾಮಸರ ಸಂಖ್ಯೆಯೇ ಹೆಚ್ಚಿನದು. ಅವರ ಸ್ವಭಾವಕ್ಕೆ ಉಚಿತವಾದ ಕೆಲಸಗಳನ್ನು ಅವರಿಗೆ ಹಚ್ಚುವುದರಿಂದ ಅವರ ಜೀವನ ನಡೆಯುವುದಲ್ಲದೆ ಅವುಗಳ ಮೂಲಕ ಅವರಿಗೊಂದು ತೃಪ್ತಿಯೂ ಉಂಟಾಗಬಹುದು. ಅವರ ಅಂತಸ್ತಿಗೆ ಮೀರಿದ ಕೆಲಸ ಅವರಿಂದ ಸಾಗದು. ನಾವೆ

ಒಡೆಯುವುದು, ನೀರು ಸೇದುವುದು, ಕೂಲಿಕೆಲಸ, ಗೃಹಕೃತ್ಯಕ್ಕೆ ಸಂಬಂಧಪಟ್ಟ ಸುತ್ತುಗೆಲಸ—ಇವೇ ಮೊಲಾದುವು ಇವರಿಗೆ ಸುಲಭಸಾಧ್ಯ. ಸಾಧಾರಣವಾಗಿ ಪ್ಲೇಟೋನಿನ ಕಾಲದಲ್ಲಿ ಆಥೆನ್ಸ್ ನಗರದಲ್ಲಿ ಗ್ರೀಕರು ಯಾರೂ ಈ ಕೈಗೆಲಸಗಳಿಗೆ ಹೋಗುತ್ತಿರಲಿಲ್ಲ. ಇವು ನಿಕೃಷ್ಟವೆಂಬ ಭಾವನೆಯೂ ಅವರಲ್ಲಿ ನೆಲಸಿತ್ತು. ಇವುಗಳನ್ನು ಕೈಕೊಳ್ಳಲು ಗ್ರೀಕರಲ್ಲದ ಒಂದು ಗುಲಾಮುಜನರ ವರ್ಗವೇ ಏರ್ಪಟ್ಟಿತ್ತು. ಈ ಜೀತಗಾರರನ್ನು ಕೊಂಡು ಮಾರುವ ಕುತ್ಸಿತ ಪದ್ಧತಿಯೂ ಗ್ರೀಕರಲ್ಲಿ ಜಾರಿಯಲ್ಲಿತ್ತು. ಗ್ರೀಕರ ನಗರರಾಜ್ಯಗಳಲ್ಲಿ ಅರ್ಧಕ್ಕೆ ಅರ್ಧಸಂಖ್ಯೆ ಇವರದೇ ಆಗಿದ್ದಿತು. ಪ್ಲೇಟೋ ಅರಿಸ್ಟಾಟಲರಂತಹ ಮೇಧಾವಿಗಳೂ ಈ ವಿಷಯದಲ್ಲಿ ತೋರ್ಪಡಿಸಿದ ಸಂಕುಚಿತ ಬುದ್ಧಿಯನ್ನು ನೋಡಿದರೆ ತಾತ್ವಿಕರು ಕೂಡ ಎಲ್ಲ ವಿಷಯಗಳಲ್ಲೂ ಸಾಮಾನ್ಯ ಜನರಿಗಿಂತ ಉತ್ತಮರಲ್ಲವೆಂಬುದು ವಿಶದಪಡುವುದು.

ಪ್ಲೇಟೋ ತನ್ನ "ರಿಪಬ್ಲಿಕ್" ನಲ್ಲಿ ಚಿತ್ರಿಸಿರುವ ಆದರ್ಶ ರಾಜ್ಯದ ಚಿತ್ರದಿಂದ ಅಡಗಿತ ಸೂತ್ರಗಳನ್ನು ಹಿಡಿಯಲು ಸಾಮಾನ್ಯಜನರು ಯೋಗ್ಯರಲ್ಲವೆಂಬುದು ವ್ಯಕ್ತವಾಗುವುದು. ಸಾಮಾನ್ಯಜನರ ಪ್ರಭುತ್ವದಲ್ಲಿ ಪ್ಲೇಟೋ ಅರಿಸ್ಟಾಟಲುಗಳಿಬ್ಬರಿಗೂ ನಂಬಿಕೆ ಇರಲಿಲ್ಲ. ಅವರ ಕಾಲದಲ್ಲಿ ಪ್ರಜಾಪ್ರಭುತ್ವದ ಹೆಸರಿನಲ್ಲಿ ನಡೆಯುತ್ತಿದ್ದ ಅನ್ಯಾಯಗಳು ಅವರಿಗೆ ಜುಗುಪ್ಸೆಯನ್ನುಂಟುಮಾಡಿದ್ದವು. ತಮ್ಮ ಗುರುವಾದ ಸಾಕ್ರೆಟೀಸಿನಂಥ ಮಹಾಪುರುಷನನ್ನೂ ನ್ಯಾಯನಿಷ್ಠನನ್ನೂ ಸಾಯಿಸಿದ ಪ್ರಜಾಪ್ರಭುತ್ವದಲ್ಲಿ ಅವರಿಗೆ ಗೌರವ ಹೇಗೆ ತಾನೆ ಹುಟ್ಟಬಹುದು? ಶ್ರೇಷ್ಠನಾಯಕತ್ವವಿಲ್ಲದ ಪ್ರಜಾಪ್ರಭುತ್ವವು ಅನಾಯಕತ್ವವೆಂದೇ ಅವರು ಭಾವಿಸಿದ್ದರು. ಪ್ರಭುತ್ವಕ್ಕೆ ಬೇಕಾದ

ಅರ್ಹತೆ ನಿಸ್ಪೃಹತೆ ಭಾವಶುದ್ಧಿಗಳು ಜನಸಾಮಾನ್ಯಕ್ಕೆ ಇರ ಲಾರವೆಂದು ಇವರ ಅಭಿಪ್ರಾಯ. ಅತ್ಯುತ್ತಮ ರಾಜಕೀಯ ಶೀಲಶಿಕ್ಷಣಗಳಿಲ್ಲದವರ ಕೈಗೆ ರಾಜ್ಯ ಸಿಕ್ಕಿದರೆ ಅದು ಮಣ್ಣು ಗೂಡುವುದು ಖಂಡಿತವೆಂದು ಮನಗಂಡಿದ್ದರು. ದಾಸವರ್ಗ ದವರಲ್ಲಿ ದಯಾದಾಕ್ಷಿಣ್ಯಗಳಿರಬೇಕೆಂದು ಬೋಧಿಸಿದರೂ ರಾಜ ಕೀಯದಲ್ಲಿ ಮಾತ್ರ ಅವರಿಗೂ ಹಕ್ಕುಬಾಧ್ಯತೆಗಳಿರಬಹುದೆಂಬ ಅಂಶವನ್ನು ಗಮನಿಸಲಿಲ್ಲ. ಇವರದು ಈಗಿನ ಪ್ರಜಾಪ್ರಭುತ್ವ ಸಿದ್ಧಾಂತಗಳಿಗೆ ವಿರೋಧವಾದ ವಾದ. ಆದರೆ ಧರ್ಮಿಷ್ಠರೂ ವಿವೇಕಿಗಳೂ ಆದ ನಾಯಕರಿಲ್ಲದ ರಾಷ್ಟ್ರದಲ್ಲಿ ಪ್ರಜಾಸಮುದಾ ಯವು ನಿಜವಾದ ಪ್ರಜಾಪ್ರಭುತ್ವವನ್ನು ಸಾಧಿಸಲಾರದೆಂಬು ದನ್ನು ಇಂದಿನ ಜನರಿಗೆ ಎಚ್ಚರಿಕೆಕೊಡಲು ಪ್ಲೇಟೋ ಅರಿಸ್ಟಾ ಟಲರ ರಾಜಕೀಯತತ್ತ್ವಗಳು ಸಹಾಯಕವಾಗಿವೆ.

ಪ್ಲೇಟೋವಿಗೂ ಅರಿಸ್ಟಾಟಲಿಗೂ ಒಂದು ಅಂಶದಲ್ಲಿ ಮಾತ್ರ ಅಭಿಪ್ರಾಯ ಭಿನ್ನತೆ ವಿಶೇಷ ರೀತಿಯದಾಗಿತ್ತು. ಅರಿಸ್ಟಾಟಲ್ ವ್ಯಕ್ತಿಸ್ವಾಮ್ಯವಾದಿ. ಪ್ರತಿಯೊಬ್ಬ ವ್ಯಕ್ತಿಯೂ ಮನೆಮಠ ಗಳನ್ನು ಮಾಡಿಕೊಂಡು ಕೃಷಿ ಕೈಗಾರಿಕೆ ವಾಣಿಜ್ಯಗಳನ್ನು ಅವ ಲಂಬಿಸಿಕೊಂಡು ಹೆಂಡತಿ ಮಕ್ಕಳೊಡನೆ ಜೀವಿಸುವುದು ನ್ಯಾಯ ವೆಂದು ತಿಳಿದಿದ್ದನು. ಆದರೆ ಹೊನ್ನು ಹೆಣ್ಣು ಮತ್ತು ಮಕ್ಕಳು ವ್ಯಕ್ತಿಯ ಸ್ವಾಮ್ಯಕ್ಕೆ ಒಳಪಟ್ಟರೆ ಅವರಿಂದ ರಾಜ್ಯದ ನಾಯ ಕರ ಪಂಗಡದಲ್ಲಿ ಸ್ವಾರ್ಥವು ಹೆಚ್ಚಿ ಸಾರ್ವಜನಿಕ ಅಭ್ಯುದಯ ದಲ್ಲಿ ಆಸಕ್ತಿ ಕುಂದುವುದೆಂದು ಪ್ಲೇಟೋವಿನ ನಂಬಿಕೆ. ಆದು ದರಿಂದ ರಾಜ್ಯದ ನಾಯಕ ಪಂಗಡದಲ್ಲಿ ಮಾತ್ರ ಹೆಂಗಸರೇ ಆಗಲಿ, ಮಕ್ಕಳೇ ಆಗಲಿ, ಆಸ್ತಿಪಾಸ್ತಿಗಳೇ ಆಗಲಿ ಯಾರೊ ಬ್ಬರ ಅಧೀನದಲ್ಲೂ ಇರಕೂಡದು. ಅಂದರೆ, ಇವೆಲ್ಲವೂ ರಾಷ್ಟ್ರದ

ಸ್ವಾಮ್ಯವಲ್ಲೀ ಇದ್ದರೆ ನಾಯಕರು ಸ್ವಾರ್ಥವಿಲ್ಲದೆ ತಮ್ಮ ಜೀವನವನ್ನೆಲ್ಲಾ ಪರಾರ್ಥಕ್ಕಾಗಿಯೇ ಅರ್ಪಿಸುವರೆಂದು ಪ್ಲೇಟೋ ಅಭಿಪ್ರಾಯಪಟ್ಟನು. ಅರಿಸ್ಟಾಟಲನಿಗೆ ಈ ಅಭಿಪ್ರಾಯಗಳು ಸರ್ವಥಾ ಸರಿಬೀಳಲಿಲ್ಲ. ಇವು ವಾಸ್ತವವಾಗಿ ನೆರವೇರದ ಬರಿಯ ಹಗಲುಗನಸುಗಳೆಂದು ಅವನು ಭಾವಿಸಿದ್ದನು. ಪ್ರತಿಯೊಬ್ಬ ವ್ಯಕ್ತಿಗೂ ತಾನು ಕೆಲಸಮಾಡಿದ್ದಕ್ಕೆ ತಕ್ಕ ಪ್ರತಿಫಲ ದೊರೆಯದೆ ತನ್ನ ದುಡಿಮೆಯಿಂದ ಗಳಿಸಿದ ಸಂಪಾದನೆಯಮೇಲೆ ಸ್ವಾಮ್ಯವಿಲ್ಲದಿದ್ದರೆ ಅವನು ತನ್ನ ಶಕ್ತಿಯನ್ನೆಲ್ಲಾ ಉಪಯೋಗಿಸಿ ಕೆಲಸಮಾಡುವುದಿಲ್ಲ; ಸೈಗಳ್ಳತನವನ್ನು ಕಲಿಯುವನು. ಇದರಿಂದ ಔದ್ಯೋಗಿಕ ನಿಪುಣತೆಗೆ ಭಂಗಬರುವುದು. ಆದಾಯವಿಲ್ಲದೆ ದುಡಿಯುವುದು ಮನುಷ್ಯನ ಸ್ವಭಾವವಲ್ಲಿಲ್ಲ. ಸ್ತ್ರೀಯರನ್ನೂ ಮಕ್ಕಳನ್ನೂ ರಾಷ್ಟ್ರದ ಸ್ವತ್ತಾಗಿಮಾಡಿಟ್ಟರೆ ಕುಟುಂಬಜೀವನಕ್ಕೂ ನೀತಿ ನಡವಳಿಕೆಗಳಿಗೂ ಹಾನಿ ತಟ್ಟುವುದೆಂದೂ, ಗಂಡನಿಗೂ ಹೆಂಡತಿಗೂ, ತಂದೆತಾಯಂದಿರಿಗೂ ಮಕ್ಕಳಿಗೂ ಇರಬೇಕಾದ ಸ್ವಾಭಾವಿಕ ಬಂಧುಪ್ರೇಮವು ತಪ್ಪುವುದೆಂದೂ, ಇವು ಪ್ರಕೃತಿಧರ್ಮಕ್ಕೆ ವಿರೋಧವಾದುವೆಂದೂ, ಇವುಗಳಿಂದ ಸಮಾಜದಲ್ಲಿ ಅನೇಕ ಹಾನಿಕರವಾದ ವೈಪರೀತ್ಯಗಳು ತಲೆದೋರುವುವೆಂದೂ ಅರಿಸ್ಟಾಟಲು ಸಾಮೂಹಿಕ ಸ್ವಾಮ್ಯವಾದವನ್ನು ಖಂಡಿಸಿದನು.

ವಾಸ್ತವವಾದ ವಿಷಯಗಳಿಗೆ ಹೆಚ್ಚು ಗಮನಕೊಟ್ಟು ತತ್ವ ವಿಚಾರಮಾಡುವ ಮನೋಭಾವ ಅರಿಸ್ಟಾಟಲಿಗೆ ಇತ್ತು. ಪ್ಲೇಟೋವಿನಂತೆ ಆದರ್ಶಭಾವಪರವಶನಾಗಿ ಸಾಮಾನ್ಯ ಜೀವನದ ಕಡೆಗೆ ವಿಮುಖನಾಗಲಿಲ್ಲ. ಬಹುಶಃ ಅವನ ವೈಜ್ಞಾನಿಕ ಮನೋವೃತ್ತಿಯೂ ವ್ಯಾಸಂಗವೂ ಇದಕ್ಕೆ ಮುಖ್ಯ

ಕಾರಣಗಳಾಗಿರಬಹುದು. ಆದರೆ ಪ್ಲೇಟೋ ಮತ್ತು ಅರಿಸ್ಟಾಟಲ್ ಇವರಿಬ್ಬರ ಮನೋಧರ್ಮದಲ್ಲಿಯೂ ಮಾತಿನಲ್ಲೂ ಇರುವ ವ್ಯತ್ಯಾಸವನ್ನು ಅತಿಯಾಗಿ ಮಾಡಿ ಅವರಿಬ್ಬರದೂ ವಿರೋಧ ತತ್ತ್ವಗಳೆಂಬ ಭಾವನೆಯನ್ನು ಮಾತ್ರ ಹುಟ್ಟಿಸಬಾರದು. ಒಟ್ಟಿನಲ್ಲಿ ಇವರಿಬ್ಬರಿಗೂ ವಿರೋಧಕ್ಕಿಂತಲೂ ಹೊಂದಿಕೆಯೇ ಹೆಚ್ಚು ಎಂಬುದನ್ನು ಮಾತ್ರ ಮರೆಯಕೂಡದು.

ರಾಜಕೀಯಕ್ಕೂ ಧರ್ಮಕ್ಕೂ ಸಂಬಂಧವಿರಬೇಕೇ ಎಂಬ ಪ್ರಶ್ನೆ ಆಗಾಗ ಏಳುತ್ತಲೇ ಇರುವುದು. ಈಗಿನ ಸ್ಥಿತಿಯಲ್ಲಂತೂ ಇದು ಬಹು ಮುಖ್ಯವಾದ ಪ್ರಶ್ನೆಯಾಗಿದೆ. ರಾಜಕೀಯದಲ್ಲಿ ಧರ್ಮದ ಪ್ರಶ್ನೆ ಎತ್ತಬಾರದೆಂದು ಕೆಲವರ ಅಭಿಪ್ರಾಯ. ಫ್ಯಾಸಿಸ್ಟರು, ಅಂದರೆ ರಾಜಕೀಯ ಸರ್ವಾಧಿಕಾರ ತತ್ತ್ವವನ್ನು ಇಂದು ಯೂರೋಪಿನಲ್ಲಿ ಪ್ರಚಾರಮಾಡುತ್ತಿರುವವರು, ಈ ಅಭಿಪ್ರಾಯವುಳ್ಳವರಾಗಿರುತ್ತಾರೆ. ಗುರಿ ಒಳ್ಳೆಯದಾಗಿದ್ದರೆ ಅದನ್ನು ಸಾಧಿಸುವ ಉಪಾಯ ಹೇಗಿದ್ದರೂ ಸರಿ ಎಂದು ಇವರ ಮತ. ಈಗಿನ ಯುದ್ಧಗಳಲ್ಲಿ ಸನ್ನದ್ಧರಾದ ಸೈನಿಕರ ಮೇಲೆ ಮಾತ್ರವೇ ಅಲ್ಲದೆ ನಿಸ್ಸಹಾಯಕರಾದ ನಿರಪರಾಧಿಗಳಾದ ಶತ್ರುರಾಜ್ಯಗಳ ಹೆಂಗಸರು ಮಕ್ಕಳ ಮೇಲೆ ಬಾಂಬುಗಳನ್ನು ಎಸೆದು ಕೊಲೆಮಾಡುವುದೂ ತಪ್ಪಲ್ಲವೆಂಬುದು ನಾಜಿಗಳ ಮತ್ತು ಫ್ಯಾಸಿಸ್ಟರ ಭಾವನೆ. ಇದಕ್ಕೆ ಪ್ಲೇಟೋ ಮತ್ತು ಅರಿಸ್ಟಾಟಲಿನ ಅಭಿಪ್ರಾಯಗಳು ತೀರ ವಿರೋಧವಾದುವು. ಅವರದು ಧರ್ಮಪ್ರಧಾನವಾದ ರಾಜನೀತಿ. ರಾಜ್ಯ ಹುಟ್ಟುವುದೂ ಆಡಳಿತ ನಡಸುವುದೂ ಧರ್ಮಕ್ಕಾಗಿಯೇ. ಧರ್ಮರಾಜ್ಯವೇ ಅವರ ಧ್ಯೇಯ.

ಪ್ರಭುತ್ವವು ನಾನಾವಿಧವಾಗಿರಬಹುದು. ಅದು ಒಬ್ಬನಲ್ಲಿ,

ಹಲವರಲ್ಲಿ, ಅಥವಾ ಪ್ರಜೆಗಳೆಲ್ಲರಲ್ಲೂ ನೆಲಸಿರಬಹುದು. ಪ್ರಭುತ್ವವು ಎಲ್ಲರಲ್ಲಿ ನೆಲಸಿದ್ದರೆ ಮಾತ್ರ ಆ ಪ್ರಭುತ್ವವು ಯೋಗ್ಯ ವಾದುದು, ಒಬ್ಬರಲ್ಲಿ ನೆಲಸಿದ್ದರೆ ಅದು ಹೀನವಾದುದು ಎಂದು ಹೇಳುವ ಹಾಗಿಲ್ಲ. ಒಂದೊಂದು ವಿಧವಾದ ಪ್ರಭುತ್ವದಲ್ಲಿ ಒಂದೊಂದು ಗುಣವಿದೆ. ಪ್ರಭುತ್ವವನ್ನು ನಡಸುವವನು ಅಥವಾ ನಡಸುವವರು ಸ್ವಾರ್ಥವನ್ನು ಬಿಟ್ಟು ಎಲ್ಲರ ಕ್ಷೇಮವನ್ನೂ ಗುರಿಯಾಗಿಟ್ಟುಕೊಂಡು ಯೋಗ್ಯ ರೀತಿಯಲ್ಲಿ ಪ್ರಭುತ್ವವನ್ನು ನಡಸಿದರೆ ಅವರ ಪ್ರಭುತ್ವವು ನ್ಯಾಯವಾದುದೂ ಯೋಗ್ಯವಾದುದೂ ಆಗುತ್ತದೆ. ಆಳುವವರು ಸ್ವಂತ ಪ್ರಯೋಜನಕ್ಕಾಗಿ ಅಥವಾ ತಮ್ಮ ಬಂಧುವರ್ಗದವರ ಏಳಿಗೆಗಾಗಿ ಅಥವಾ ತಮ್ಮ ಕೋಮಿನವರ ಮೇಲ್ಮೆಗಾಗಿ ತಮ್ಮ ಅಧಿಕಾರವನ್ನು ದುರುಪಯೋಗಪಡಿಸಿದಾಗ ಅಂಥ ಪ್ರಭುತ್ವವು ಹೇಯವಾಗುವುದು. ಆಡಳಿತ ಒಳ್ಳೆಯದೇ ಕೆಟ್ಟದ್ದೇ ಎಂಬುದನ್ನು ಅದು ತನ್ನ ಉದ್ದೇಶವನ್ನು ಸಾರ್ಥಕಪಡಿಸಿತೇ ಇಲ್ಲವೇ ಎಂದು ಒರೆಹಚ್ಚಿ ನೋಡಿ ಹೇಳಬೇಕಲ್ಲದೆ ಅದು ಏಕನಾಯಕ ರಾಜ್ಯ, ಬಹುನಾಯಕರಾಜ್ಯ, ಅಥವಾ ಪ್ರಜಾಪ್ರಭುತ್ವ ರಾಷ್ಟ್ರ ಎಂಬುದರಿಂದ ನಿರ್ಧರಿಸಲಾಗುವುದಿಲ್ಲ. ಏಕನಾಯಕ ಪ್ರಭುತ್ವ ಉತ್ತಮವಾದುದಾಗಿಯೂ ಇರಬಹುದು, ನೀಚವಾದುದಾಗಿಯೂ ಇರಬಹುದು. ಹಾಗೆಯೇ ಪ್ರಜಾಪ್ರಭುತ್ವವು ಕೂಡ ಧ್ಯೇಯರೂಪವಾದುದಾಗಿರಬಹುದು, ಹೇಯರೂಪವಾದುದಾಗಿರಬಹುದು. ಒಂದೊಂದು ಬಗೆಯ ಪ್ರಭುತ್ವದ ಧ್ಯೇಯರೂಪವನ್ನೂ ಹೇಯರೂಪವನ್ನೂ ಅರಿಸ್ಟಾಟಲ್ ನಿರ್ಮತ್ಸರನಾಗಿ ಚಿತ್ರಿಸಿರುವನು. ಅದು ಧಾರ್ಮಿಕವಾಗಿದ್ದರೆ ಉಚ್ಚವಾದ ಪ್ರಭುತ್ವವಾಗುವುದು ; ಅಧರ್ಮಕ್ಕೆ ಬಿದ್ದರೆ ನೀಚವಾಗುವುದು.

ಸರ್ಕಾರವು ಪ್ರಜೆಗಳ ಕುಟುಂಬ ಜೀವನದಲ್ಲಿ, ಧಾರ್ಮಿಕ ಜೀವನದಲ್ಲಿ, ಮತವಿಚಾರಗಳಲ್ಲಿ ಪ್ರವೇಶಿಸುವ ಅಧಿಕಾರ ವಿರಬಾರದೆಂಬ ನೀತಿ ಈಗ ಪ್ರಜಾಪ್ರಭುತ್ವ ರಾಷ್ಟ್ರಗಳಲ್ಲಿ ರೂಢಿಯಲ್ಲಿದೆ. ಆದರೆ ಗ್ರೀಕ್ ತತ್ವಜ್ಞರ ಅಭಿಪ್ರಾಯ ಬೇರೆಯಾಗಿತ್ತು. ಜನರ ಅಂತರಂಗ ಜೀವನವೂ ಬಹಿರಂಗ ಜೀವನವೂ ರಾಜಕೀಯ ಅಧಿಕಾರಕ್ಕೆ ಒಳಪಡಬಹುದೆಂಬುದು ಗ್ರೀಕ್ ತಾತ್ವಿಕರ ಮತ. ಗ್ರೀಕರ ನಗರ ರಾಜ್ಯಗಳಲ್ಲಿ ವ್ಯಕ್ತಿ ಜೀವನವು ಸಮಾಜ ಜೀವನದಲ್ಲಿ ಸಂಪೂರ್ಣವಾಗಿ ಐಕ್ಯವಾಗಿದ್ದುದೇ ಇದಕ್ಕೆ ಕಾರಣ. ಇದರಿಂದ ರಾಜಕೀಯ ಸಂಸ್ಥೆಗಳ ಕಾರ್ಯರಂಗವು ಇಡೀ ಸಮಾಜವನ್ನು ಆವರಿಸಿದ್ದಿತು. ಆದರೆ ಆಧುನಿಕ ಜೀವನ ಪರಿಸ್ಥಿತಿಗಳಿಗೆ ಇದು ಹೊಂದುವುದಿಲ್ಲವೆಂದು ಅನೇಕ ರಾಜ್ಯಶಾಸ್ತ್ರಜ್ಞರು ಅಭಿಪ್ರಾಯಪಡುತ್ತಾರೆ. ಗ್ರೀಕರ ಮನೋಭಾವದಲ್ಲಿ ಜೀವಾಳವಿದೆ ಎಂಬುದಕ್ಕೆ ಈಗಿನ ಸರ್ವಾಧಿಕಾರ ರಾಷ್ಟ್ರಗಳೇ ನಿದರ್ಶನವಾಗಿವೆ. ಆದರೆ ನಾವು ಮುಖ್ಯವಾಗಿ ವಿಮರ್ಶೆ ಮಾಡಬೇಕಾದುದು ವ್ಯಕ್ತಿಗಾಗಿ ರಾಜ್ಯವೇ ಅಥವಾ ರಾಜ್ಯಕ್ಕಾಗಿ ವ್ಯಕ್ತಿಯೋ ಎಂಬ ಪ್ರಶ್ನೆ. ವ್ಯಕ್ತಿ ಇರುವುದು ರಾಜ್ಯದ ಕ್ಷೇಮಕ್ಕಾಗಿಯೇ ಎಂಬುದು ಪ್ಲೇಟೋ ಅರಿಸ್ಟಾಟಲರ ಉತ್ತರ. ವ್ಯಕ್ತಿಯ ಹಿತಕ್ಕೂ ರಾಜ್ಯದ ಉದ್ದೇಶಗಳಿಗೂ ಪರಸ್ಪರ ವಿರೋಧವಿಲ್ಲವೆಂಬುದು ಇವರ ನಂಬಿಕೆ. ವ್ಯಕ್ತಿಜೀವನವು ರಾಷ್ಟ್ರದ ಆಡಳಿತಕ್ಕೆ ಪೂರ್ಣವಾಗಿ ಒಳಪಡಕೂಡದು, ಪ್ರತಿವ್ಯಕ್ತಿಗೂ ಕೆಲವು ಅಂಶಗಳಲ್ಲಿ ಸ್ವತಂತ್ರವಾಗಿ ವರ್ತಿಸುವ ಹಕ್ಕು ಉಂಟು ಎಂಬುದು ರೋಮನ್ ತಾತ್ವಿಕರು ಪ್ರತಿಪಾದಿಸಿದ ತತ್ವ.

ಗ್ರೀಕ್ ರಾಜ್ಯಗಳು ರೋಮನರಿಗೆ ಸೋತು ತಮ್ಮ ಸ್ವಾತಂ

ತ್ರ್ಯವನ್ನು ಕಳೆದುಕೊಂಡುವು. ಯೂರೋಪಿನ ರಾಜಕೀಯ ಚರಿತ್ರೆಯಲ್ಲಿ ಅನಾಮಧೇಯ ರಾಷ್ಟ್ರಗಳಾದುವು. ಆದರೆ ಗ್ರೀಕ್ ತತ್ವಜ್ಞಾನಿಗಳ ವಿಚಾರಸರಣಿಯು ಚರಿತ್ರೆಯ ಪುಟಗಳಲ್ಲಿ ಚಿರಸ್ಥಾಯಿಯಾಗಿ ಉಳಿದಿದೆ. ಗ್ರೀಕರನ್ನು ಗೆದ್ದರೂ ರೋಮನರು ಗ್ರೀಕರ ಉದಾತ್ತ ಸಂಸ್ಕೃತಿಗೆ ಶರಣಾದರು. ಪರಾಜಿತರಾದ ಗ್ರೀಕರ ಸಾರಸ್ವತಸಂಪತ್ತು ರೋಮನ್ ಪಂಡಿತರ ಮನಸ್ಸನ್ನು ಸೂರೆಗೊಂಡಿತು. ಪ್ಲೇಟೋ ಅರಿಸ್ಟಾಟಲರು ಬೋಧಿಸಿದ ತತ್ವಗಳು ಸಾವಿರಾರುವರ್ಷಗಳ ಹಿಂದಿನವಾದರೂ ಇಂದಿಗೂ ರಾಜ್ಯಶಾಸ್ತ್ರಜ್ಞರಮೇಲೆ ತಮ್ಮ ಪ್ರಭಾವವನ್ನು ಬೀರುತ್ತಿವೆ.

## ೨. ರೋಮನ್ನರ ರಾಜಕೀಯ ತತ್ವಗಳು

ಗ್ರೀಕರಂತೆ ರೋಮನ್ನರಿಗೆ ತತ್ವವಿಚಾರದಲ್ಲಿ ಹೆಚ್ಚು ಆಸಕ್ತಿ ಇರಲಿಲ್ಲ. ರೋಮನರು ಸಾಧಾರಣವಾಗಿ ಕಾರ್ಯತತ್ಪರರು. ರಾಜ್ಯವನ್ನು ಕಟ್ಟುವುದೂ ಶಿಸ್ತಿನಿಂದ ಆಡಳಿತ ನಡಸುವುದೂ ಅವರ ಮುಖ್ಯ ಧ್ಯೇಯವಾಗಿತ್ತು. ಇದಕ್ಕೆ ಬೇಕಾದ ಅಂಶಗಳಿಗೆ ಇವರು ಗಮನಕೊಟ್ಟರು. ರೋಮನ್ನರು ಕೇವಲ ವ್ಯವಹಾರದ ದೃಷ್ಟಿಯಿಂದ ಆಡಳಿತಸಮಸ್ಯೆಗಳನ್ನು ವಿಮರ್ಶೆಮಾಡಿದರು. ರಾಜ್ಯವೆಂಬುದು ಮನುಷ್ಯನು ತನ್ನ ಐಹಿಕಪ್ರಯೋಜನಕ್ಕಾಗಿ ಮಾಡಿಕೊಂಡ ವ್ಯಾವಹಾರಿಕಸಂಸ್ಥೆ ಎಂಬುದು ಇವರ ಮುಖ್ಯ ಅಭಿಪ್ರಾಯ. ರೋಮನ್ನರ ರಾಜ್ಯವು ಮೊಟ್ಟಮೊದಲು ಸಣ್ಣದಾಗಿದ್ದು ಅವರ ಸಮರದಕ್ಷತೆಯಿಂದ ಕ್ರಮೇಣ ದೊಡ್ಡ ಸಾಮ್ರಾಜ್ಯವಾಗಿ ಪರಿಣಮಿಸಿತು. ಈಗಿನ ಬ್ರಿಟಿಷ್ ಸಾಮ್ರಾಜ್ಯದಲ್ಲಿದ್ದಂತೆ ನಾನಾದೇಶದ ಜನರು

ಇವರ ಆಡಳಿತಕ್ಕೆ ಒಳಗಾಗಿದ್ದರು. ಬ್ರಿಟಿಷರಂತೆ ರೋಮನ್ನರೂ ತಾವು ಜಯಿಸಿದ ದೇಶಗಳಲ್ಲಿ ಅವ್ಯವಸ್ಥೆಯನ್ನು ಹೋಗಲಾಡಿಸಿ ಶಾಂತಿಸ್ಥಾಪನೆ ಮಾಡುವುದು ತಮ್ಮ ಧ್ಯೇಯವೆಂದು ಎಣಿಸಿದ್ದರು. ಹೀಗೆ ಅವರು ಅಧೀನರಾಷ್ಟ್ರಗಳಲ್ಲೇರ್ಪಡಿಸಿದ ಶಾಂತಿಯನ್ನು "ಪಾಕ್ಸ್ ರೊಮಾನಾ" ಎಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದರು.

ಹೀಗೆ ಶಾಂತಿಯನ್ನು ಸ್ಥಾಪಿಸುವುದಲ್ಲದೆ ಎಲ್ಲ ಜನಾಂಗಗಳಿಗೂ ಇವರು ರೋಮನ್ನರು, ಇವರು ಬೇರೆಯವರು ಎಂಬ ಭೇದಭಾವವಿಲ್ಲದೆ ಸಮದೃಷ್ಟಿಯಿಂದ ನ್ಯಾಯವನ್ನು ಸಲ್ಲಿಸುವ ಏರ್ಪಾಡುಮಾಡಿದುದು ರೋಮನ್ನರ ಹಿರಿಮೆ. ಇದರಿಂದ ರೋಮನ್ನರ ರಾಜ್ಯದಲ್ಲಿ ಮಾನವ ವ್ಯಕ್ತಿತ್ವಕ್ಕೆ ಹೆಚ್ಚು ಗೌರವ ದೊರೆತಂತಾಯಿತು. ನ್ಯಾಯದ ಮುಂದೆ ಎಲ್ಲರೂ ಸಮಾನರಾದರು; ರಾಷ್ಟ್ರವು ಮೇಲು ಕೀಳೆನ್ನದೆ ಎಲ್ಲರಿಗೂ ನ್ಯಾಯ ಸಲ್ಲಿಸುವ ನ್ಯಾಯಸಂಸ್ಥೆಯಾಯಿತು.

ಜನರ ಸಮ್ಮತಿಯ ಮೇಲೆಯೇ ಪ್ರಭುತ್ವವು ನಿಲ್ಲಬೇಕೆಂಬ ತತ್ವವನ್ನು ಮಂಡಿಸಿದ ಪ್ರಶಸ್ತಿಯೂ ರೋಮನ್ನರಿಗೆ ಸೇರಬೇಕು. ಈ ತತ್ವವನ್ನು ನಿರೂಪಿಸಿದವನು ಸ್ಟೋಯಿಕ್ ಪಂಥದ ಸಿಸಿರೋ. ಮನುಷ್ಯರೆಲ್ಲರೂ ಒಂದು ಭ್ರಾತೃವರ್ಗಕ್ಕೆ ಸೇರಿದವರು; ಪ್ರತಿಯೊಬ್ಬ ಮಾನವನಿಗೂ ಹಲವು ಆಜನ್ಮಸಿದ್ಧವಾದ ಸ್ವಾಭಾವಿಕ ಹಕ್ಕುಬಾಧ್ಯತೆಗಳಿರುವುವು—ಎಂಬ ಉದಾರ ತತ್ವವನ್ನೂ ಅವನು ಬೋಧಿಸಿದನು. ಈ ಹಕ್ಕುಗಳನ್ನು ಕಸಿದುಕೊಳ್ಳಲು ಯಾವ ರಾಜಕೀಯ ಸಂಸ್ಥೆಗೂ ಅಧಿಕಾರವಿಲ್ಲ; ಇವಕ್ಕೆ ಭಂಗಬರದಂತೆ ಇವನ್ನು ಕಾಪಾಡಿಕೊಂಡುಬರುವ ಕೆಲಸ ಆಡಳಿತಕ್ಕೆ ಸೇರಿದ್ದು—ಎಂದೂ ಅವನು ವಾದಿಸಿದನು.

ಇಡೀ ಮಾನವವರ್ಗವೆಲ್ಲವೂ ಒಂದು ಭ್ರಾತೃವರ್ಗ. ಆದುದರಿಂದ ತನ್ನ ಜಾತಿ, ತನ್ನ ಮತದವರು, ತನ್ನ ಕಸಬಿನವರು, ತನ್ನ ದೇಶದವರು ಎಂಬ ಸಂಕುಚಿತ ಭಾವನೆಗೆ ಮಾನವನು ಈಡಾಗದೆ, ಎಲ್ಲರನ್ನೂ ಭ್ರಾತೃಭಾವನೆಯಿಂದ ಕಾಣಬೇಕು; ಅವನು ಮಾನವರಾಷ್ಟ್ರದ ಪ್ರಜೆಯಂತೆ ನಡೆದುಕೊಳ್ಳಬೇಕು. ಈ ತತ್ವವನ್ನು ಪ್ರತಿಪಾದಿಸಿದ ಪ್ರಶಸ್ತಿಯೂ ಕೂಡ ಇವನಿಗೇ ಸೇರುತ್ತದೆ.

ಈ ತತ್ವಗಳೇನೋ ಉದಾತ್ತವಾದುವು. ಆದರೆ ಸಿಸಿರೋವಿಗೆ ಇದ್ದ ಉದಾತ್ತಭಾವನೆ ರೋಮನ್ ಅಧಿಕಾರಿಗಳಿಗೆ ಇರಲಿಲ್ಲ. ಅವರು ಸ್ವಾರ್ಥಪರರೂ ಸಂಕುಚಿತ ಮನಸ್ಕರೂ ಆಗಿದ್ದುದರಿಂದ ಅವರ ನ್ಯಾಯದೃಷ್ಟಿ ಮಸಕಾಯಿತು. ಅವರು ಮಾಡಿದ ಅನ್ಯಾಯಗಳು ಸಾಮ್ರಾಜ್ಯದ ಜನಾಂಗಗಳಲ್ಲಿ ಅಸಮಾಧಾನವನ್ನು ಹುಟ್ಟಿಸಿದುವು. ಇವರು ತಮ್ಮ ಅಸಮಾಧಾನವನ್ನು ಸೂಚಿಸುವ ಚಳವಳಿಯನ್ನು ಹೂಡಿದಾಗ ರೋಮನ್ ನಾಯಕರು ತಮ್ಮ ಸೈನ್ಯಬಲದ ಸಹಾಯದಿಂದ ಅವರನ್ನು ಪಾತಾಳಕ್ಕೆ ಅದುಮಿಬಿಡುತ್ತಿದ್ದರು. ಈ ಕಾರಣಗಳಿಂದ ರೋಮನ್ ಸಾಮ್ರಾಜ್ಯವು ಕ್ರಮಕ್ರಮವಾಗಿ ನಶಿಸುತ್ತ ಬಂದು ಕೊನೆಗೆ ಪೂರ್ಣವಾಗಿ ಕುಸಿದು ಬಿತ್ತು.

# ೩. ಮಧ್ಯಯುಗದ ರಾಜಕೀಯತತ್ವಗಳು

ಯೂರೋಪಿನ ಮಧ್ಯಯುಗವು ಕ್ರಿಸ್ತಶಕ ಐದನೆಯ ಶತಮಾನದಲ್ಲಿ ಪ್ರಾರಂಭವಾಗಿ ಹದಿನೈದನೆಯ ಶತಮಾನಕ್ಕೆ ಕೊನೆಗಂಡಿತು. ಈ ಮಧ್ಯಯುಗವನ್ನು ಚರಿತ್ರಕಾರರು ಕತ್ತಲೆಯ ಯುಗವೆಂದೂ ಕರೆಯುತ್ತಾರೆ. ಅಂದರೆ ಈ ಒಂದುಸಾವಿರ

ವರ್ಷಗಳ ಕಾಲ ಯೂರೋಪಿನ ಜನರು ಕತ್ತಲೆಯಲ್ಲಿದ್ದರು ಎಂದು ಇವರ ಭಾವನೆ. ಹಾಗೆ ಅವರ ಜೀವನದಲ್ಲಿ ಬೆಳಕೇ ಇರಲಿಲ್ಲವೆಂದು ಹೇಳುವುದು ಸರಿಯಲ್ಲ. ಅವರು ಬೆಳಕೆಂದು ನಂಬಿದ್ದುದು ಮತದ ಬೆಳಕು ಮಾತ್ರ, ಅದರಲ್ಲೂ ಕ್ರೈಸ್ತ ಮತದಿಂದ ಬಂದ ಬೆಳಕು ಮಾತ್ರ.

ಮಧ್ಯಯುಗದಲ್ಲಿ ಕ್ರೈಸ್ತ ಮತವು ಜೀವನದ ಎಲ್ಲ ಅಂಶ ಗಳನ್ನೂ ಆವರಿಸಿ ಸರ್ವಾಂತರ್ಯಾಮಿಯೂ ಸರ್ವಾಧಿಕಾರಿಯೂ ಆಗಿತ್ತು. ಜನರ ದಾಂಪತ್ಯ ಜೀವನ, ಆರ್ಥಿಕ ಜೀವನ, ಕಲೆ, ಸಾಹಿತ್ಯ, ತತ್ವ ಎಲ್ಲವೂ ಅದಕ್ಕಾಗಿಯೇ ಅದರ ಅಧೀ ನತೆಗೆ ಒಳಪಟ್ಟಿದ್ದವು. ಇವುಗಳಂತೆಯೇ ರಾಜಕೀಯವೂ ಕೂಡ ಮತದ ದಾಸ್ಯದಲ್ಲಿ ಇರಬೇಕಾಯಿತು. ರಾಜನೀತಿಗೆ ಪ್ರಮಾಣ ಕ್ರೈಸ್ತ ವೇದ; ರಾಜರು ಅದರಲ್ಲಿ ವಿಧಾಯಕವಾಗಿ ರುವುದನ್ನು ಭಗವಂತನ ಆಜ್ಞೆಯೆಂದು ಎಣಿಸಿ ಅವುಗಳನ್ನು ಶಿರಸಾವಹಿಸಿ ಪಾಲಿಸಬೇಕು. ಇಹಲೋಕದಲ್ಲಿ ಭಗವಂತನ ಪ್ರತಿನಿಧಿಯಾಗಿ ಅವನ ಆಜ್ಞೆಯನ್ನು ನಡಸುವ ಅಧಿಕಾರಿ ಕ್ರೈಸ್ತಜಗದ್ಗುರುವಾದ ಪೋಪನು.

ಭೂಲೋಕದಲ್ಲಿ ದೇವರ ಸಾಮ್ರಾಜ್ಯವನ್ನು ಸ್ಥಾಪಿಸುವುದು ಪೋಪನ ಪವಿತ್ರ ಕೆಲಸ. ಇದರ ಸಾಧನೆಗಾಗಿ ಪ್ರತಿಯೊಬ್ಬನೂ ನೆರವಾಗಬೇಕು. ಹಾಗೆ ಮಾಡದವರು ಜಗದೀಶ್ವರನ ಆಗ್ರಹಕ್ಕೆ, ನಿಗ್ರಹಕ್ಕೆ ಪಾತ್ರರಾಗುವರು. ಪೋಪನೆಂಬ ಧರ್ಮಾಧಿಕಾರಿಯು ಭೂಲೋಕದಲ್ಲಿ ಜಗದೀಶ್ವರನ ಪ್ರತಿನಿಧಿಯಾದುದರಿಂದ ಅವನ ಕಟ್ಟಳೆಗಳನ್ನು ಮೀರಿದವರಿಗೆ ನರಕದಲ್ಲಿ ಕೊಡುವ ಶಿಕ್ಷೆ ಯನ್ನು ಇಲ್ಲಿಯೇ ಕೊಟ್ಟು ಅವರನ್ನು ಸರಿಯಾದ ದಾರಿಗೆ ತರುವುದು ಅವನ ಕೆಲಸವಾಗಿತ್ತು. ರಾಜರು ತಮ್ಮ ತನು

ಮನ ಧನಗಳನ್ನೂ ಸೈನ್ಯಬಲವನ್ನೂ ಪೋಪನ ಒತ್ತಾಸೆಗಾಗಿ, ಧರ್ಮಸಾಮ್ರಾಜ್ಯಸ್ಥಾಪನೆಗಾಗಿ ಮೀಸಲಾಗಿಡಬೇಕಾದದ್ದೇ ರಾಜಧರ್ಮವಾಗಿತ್ತು. ರಾಜರಾಜರಲ್ಲಿ ವೈಮನಸ್ಯವುಂಟಾದಾಗ ಈ ವಿಷಯದಲ್ಲಿ ಪಂಚಾಯತಿಮಾಡಿ ತೀರ್ಪುಕೊಡುವ ಅಧಿಕಾರ ಪೋಪನದಾಗಿತ್ತು.

ಕ್ರೈಸ್ತಮತವು ರೋಮನರ ಸಾಮ್ರಾಜ್ಯಕ್ಕೆ ರಾಜಧಾನಿಯಾಗಿದ್ದ ರೋಮ್‌ನಗರದಲ್ಲಿಯೇ ಸ್ಥಾಪಿತವಾಗಿದ್ದುದರಿಂದ ರಾಜಕೀಯ ಸಾಮ್ರಾಜ್ಯದ ಕೇಂದ್ರವೂ ದೇವರ ಸಾಮ್ರಾಜ್ಯದ ಕೇಂದ್ರವೂ ಒಂದಾದುವು. ರೋಮನರ ಸಾಮ್ರಾಜ್ಯವಾದಕ್ಕೆ ಮತಧರ್ಮದ ಬಣ್ಣಕಟ್ಟಿ ಕ್ರೈಸ್ತಧರ್ಮ ಪಂಡಿತರು ಧರ್ಮ ಸಾಮ್ರಾಜ್ಯ ವಾದವನ್ನು ಹೂಡಿದ್ದರು. ಈ ವೇಳೆಗೆ ಪಶ್ಚಿಮ ಯುರೋಪಿನಲ್ಲಿ ಧಾಳಿ ಎಬ್ಬಿಸಿ ರಾಜ್ಯಕಟ್ಟುತ್ತಿದ್ದ ಗಾಥರು, ವಾಂಡಲರು, ಫ್ರಾಂಕರೇ ಮೊದಲಾದ ಒರಟು ಜನರು ಕ್ರೈಸ್ತ ದೀಕ್ಷೆಯನ್ನು ಪಡೆದಿದ್ದರು. ಕ್ರೈಸ್ತಧರ್ಮದ ದೀಕ್ಷೆಯನ್ನು ಕೈಕೊಂಡಿದ್ದ ಅವರಿಗೆ ಅವರ ರಾಜ್ಯಾಭಿಷೇಕ ಕಾಲದಲ್ಲಿ ಪೋಪನೇ ಖುದ್ದಾಗಿ ಬಂದಾಗಲಿ, ತನ್ನ ಪ್ರತಿನಿಧಿಯನ್ನು ಕಳುಹಿಸಿಯಾಗಲಿ ಅನುಗ್ರಹ ಮಾಡಿ ಕಿರೀಟಧಾರಣೆ ಮಾಡಿಸುವ ಏರ್ಪಾಡಿದ್ದಿತು. ಈ ಏರ್ಪಾಡಿನಿಂದ ರಾಜರು ಪೋಪನ ದೇವದತ್ತವಾದ ಅಧಿಕಾರವನ್ನು ಒಪ್ಪಿಕೊಂಡಂತಾಯಿತು. ಕ್ರಿ.ಶ. ೮೦೦ ರಲ್ಲಿ ಇಟಲಿಯ ಮೇಲೆ ದಂಡೆತ್ತಿ ಬಂದ ಜರ್ಮನರ ದೊರೆಯಾದ ಚಾರಲ್ಸ್ ದಿ ಗ್ರೇಟ್ ಎಂಬವನಿಗೆ ರಾಜ್ಯಾಭಿಷೇಕ ಮಾಡಿ ಆತನಿಗೆ ಧಾರ್ಮಿಕ ರೋಮನ್ ಸಾಮ್ರಾಜ್ಯದ ಚಕ್ರವರ್ತಿ ಎಂಬ ಬಿರುದನ್ನು ಪೋಪನು ದಯಪಾಲಿಸಿದನು. ಇದರಿಂದ ಕ್ರೈಸ್ತಧರ್ಮ

ಸಂಸ್ಥೆಗೂ ಕ್ರೈಸ್ತ ರಾಜ್ಯಸಂಸ್ಥೆಗೂ ಮಧುರ ಬಾಂಧವ್ಯ ಬೆಳೆದು ಯೂರೋಪಿನಲ್ಲಿ ಐಕಮತ್ಯಭಾವ ಹುಟ್ಟಲು ಅನುಕೂಲವಾಯಿತು. ಮಧ್ಯಕಾಲದ ರಾಜಕೀಯ ತತ್ವಗಳು ಬಲುಮಟ್ಟಿಗೆ ಈ ಧಾರ್ಮಿಕ ರೋಮ್ ಸಾಮ್ರಾಜ್ಯಭಾವನೆಯನ್ನು ಅವಲಂಬಿಸಿವೆ.

ಪೋಪನ ಧರ್ಮಸಂಸ್ಥೆಗೂ ಸಾಮ್ರಾಜ್ಯ ಸಂಸ್ಥೆಗೂ ಇದ್ದ ಈ ಮಧುರ ಬಾಂಧವ್ಯ ಬಹಳ ಕಾಲ ಉಳಿಯಲಿಲ್ಲ. ಅನೇಕ ರಾಜಕೀಯ ವಿಷಯಗಳಲ್ಲಿ ಚಕ್ರವರ್ತಿಯು ಕ್ರೈಸ್ತಮತವನ್ನು ಪ್ರತಿಭಟಿಸಿ ವರ್ತಿಸಬೇಕಾಯಿತು. ಇದರಿಂದ ವೈಷಮ್ಯ ಹುಟ್ಟಿತು. ರಾಜರು ಕೂಡ ಪೋಪನ ಅಧಿಕಾರದಂತೆ ತಮ್ಮ ಅಧಿಕಾರವು ದೇವದತ್ತವಾದದ್ದೆಂದು ವಾದಿಸಿದರು. "ನಾ ವಿಷ್ಣುಃ ಪೃಥಿವೀಪತಿಃ" ಎಂಬ ಭಾವನೆಗೆ ಇದನ್ನು ಹೋಲಿಸಬಹುದು.

ಕ್ರೈಸ್ತಮತಕ್ಕೂ ಕ್ರೈಸ್ತ ರಾಷ್ಟ್ರಕ್ಕೂ ದೀರ್ಘಕಾಲ ಹೋರಾಟ ನಡೆಯಿತು. ಇಷ್ಟು ಹೊತ್ತಿಗೆ ಯೂರೋಪಿನಲ್ಲಿ ರಾಷ್ಟ್ರಭಾವನೆ ಬೆಳೆಯಿತು. ಪ್ರತಿ ರಾಷ್ಟ್ರವೂ ಸ್ವಾತಂತ್ರ್ಯ ಪ್ರಭುತ್ವಗಳನ್ನುಳ್ಳದ್ದೆಂದೂ ಕ್ರೈಸ್ತಮತಕ್ಕಾಗಲಿ ಹೊರಗಿನ ಇನ್ನಾವ ಸಂಸ್ಥೆಗಾಗಲಿ ಅದರ ರಾಜ್ಯಾಡಳಿತದಲ್ಲಿ ಕೈವಾಡವಿರಲು ಅವಕಾಶವಿಲ್ಲವೆಂದೂ ಹೊಸ ರಾಜಕೀಯ ಭಾವನೆಯು ಉದಯಿಸಿತು. ಇಂಗ್ಲೆಂಡು, ಫ್ರಾನ್ಸ್, ಸ್ಪೇನ್ ರಾಜ್ಯಗಳು ಸ್ವತಂತ್ರ ರಾಷ್ಟ್ರಗಳಾಗಿ ತಮ್ಮ ರಾಷ್ಟ್ರದ ಪ್ರಾಬಲ್ಯವನ್ನು ಸಾಧಿಸಿಕೊಂಡವು. ಕ್ರೈಸ್ತಮತದಲ್ಲಿ ಹುಟ್ಟಿದ ಅಂತಃಕಲಹಗಳಿಂದಲೂ ೧೪, ೧೫ ನೆಯ ಶತಮಾನಗಳಲ್ಲಿ ನಡೆದ ದೀರ್ಘವಾದ ಯುದ್ಧಗಳ ದೆಸೆಯಿಂದಲೂ ರಾಷ್ಟ್ರಭಾವನೆ ಇನ್ನೂ ಹೆಚ್ಚಾಯಿತು. ರಾಷ್ಟ್ರೀಯತತ್ವಸ್ಥಾಪನೆಯಾಗಿ ರಾಜಕೀಯದಲ್ಲಿ

ಮತದೃಷ್ಟಿಯ ಬದಲು ವ್ಯಾವಹಾರಿಕ ದೃಷ್ಟಿಯು ಮೂಡಿತು. ಮತಸಂಬಂಧವಾದ ರಾಜಕೀಯ ತತ್ವಗಳ ಬದಲು ರಾಜಕೀಯದಲ್ಲಿ ತಾರ್ಕಿಕ ತತ್ವಗಳು ತಲೆಯೆತ್ತಿದುವು. ಮಧ್ಯಕಾಲವು ಇಲ್ಲಿಗೆ ಅವಸಾನಗೊಂಡಿತು.

# ೪. ಆಧುನಿಕ ರಾಜಕೀಯ ತತ್ವಗಳು

## I. ನಿಕೊಲೋ ಮ್ಯಾಕಿಯವೆಲ್ಲಿ-'ಇಟಲಿಯ ಕೌಟಿಲ್ಯ'

ಮಧ್ಯಯುಗವು ಹದಿನೈದನೆಯ ಶತಮಾನಕ್ಕೆ ಕೊನೆಗಂಡಿತು. ಅದರ ಕೊನೆಕೊನೆಗೆ ಕ್ರೈಸ್ತ ಜಗದ್ಗುರುವಾದ ಪೋಪನನ್ನು ಒಂದೊಂದು ಕಡೆಯಿಂದಲೂ ಜನರು ಪ್ರತಿಭಟಿಸಲು ಪ್ರಾರಂಭಿಸಿದರು. ಈ ಪ್ರತಿಭಟನೆಯ ಮನೋಭಾವ ಮೊದಲು ಹುಟ್ಟಿದುದು ವಿಜ್ಞಾನಕ್ಷೇತ್ರದಲ್ಲಿ. ಸೂರ್ಯನು ಭೂಮಿಯ ಸುತ್ತಲೂ ಸುತ್ತುವುದಿಲ್ಲ, ಅದರ ಬದಲಾಗಿ ಭೂಮಿಯು ಸೂರ್ಯನ ಸುತ್ತ ಸುತ್ತುವುದು ಎಂಬ ವೈಜ್ಞಾನಿಕತತ್ವವನ್ನು ಸಾರಿ ಕೊಪರ್ನಿಕಸ್ಸನು ವಿಜ್ಞಾನವಿಚಾರಗಳಲ್ಲಿ ಕ್ರೈಸ್ತವೇದದ ಪ್ರಾಮಾಣ್ಯವನ್ನು ಮುರಿದನು. ಗೆಲಿಲಿಯೋ, ಬ್ರೂನೋ ಮುಂತಾದವರು ಕೂಡ ವಿಚಾರ ಸ್ವಾತಂತ್ರ್ಯದ ಪತಾಕೆಯನ್ನು ಎತ್ತಿಹಿಡಿದರು. ರಾಜಕೀಯದಲ್ಲಿ ಕೂಡ ಪ್ರಜೆಗಳೂ ಪ್ರಭುಗಳೂ ಪೋಪನ ಅಧಿಕಾರವನ್ನು ಪ್ರತಿಭಟಿಸಿ ತಮ್ಮ ರಾಷ್ಟ್ರಸ್ವಾತಂತ್ರ್ಯವನ್ನು ಸಾಧಿಸಲು ಮೊದಲುಮಾಡಿದರು. ರಾಜಕೀಯ ತತ್ವಜ್ಞರು ರಾಜಕೀಯ ರೀತಿನೀತಿಗಳನ್ನು ವ್ಯವಹಾರದೃಷ್ಟಿಯಿಂದ ಬುದ್ಧಿಯ ಪ್ರಮಾಣಕ್ಕನುಗುಣವಾಗಿ ವಿಮರ್ಶಿಸತೊಡಗಿದರು. ಇಂಥವರಲ್ಲಿ ಇಟಲಿಯ ದೇಶದ ತಾತ್ವಿಕನಾದ ನಿಕೊಲೋ

ವ್ಯಾಕಿಯವೆಲ್ಲಿ ಮೊದಲನೆಯವನು. ಇವನ ರಾಜನೀತಿ ಗ್ರಂಥವ ಹೆಸರು "ಪ್ರಿನ್ಸ್" (ರಾಜಕುಮಾರ). ಇವನ್ನು ಅವನು ತನ್ನ ದೇಶದ ರಾಜಕುಮಾರನ ಉಪಯೋಗಕ್ಕಾಗಿ ಬರೆದುದರಿಂದ ಆ ಹೆಸರನ್ನು ತನ್ನ ಗ್ರಂಥಕ್ಕೆ ಕೊಟ್ಟನು. ಇಂಗ್ಲೆಂಡ್, ಫ್ರಾನ್ಸ್ ದೇಶಗಳಂತೆಯೇ ತನ್ನ ಮಾತೃಭೂಮಿ ಯಾದ ಇಟಲಿಯು ಪೋಪನ ಅಧಿಕಾರದಿಂದ ಬಿಡುಗಡೆ ಹೊಂದಿ ಸ್ವತಂತ್ರ ರಾಷ್ಟ್ರವಾಗಲು ತನ್ನ ದೇಶದ ರಾಜನು ಯಾವ ನೀತಿಯನ್ನು ಅನುಸರಿಸಬೇಕೆಂಬುವನ್ನು ಇಲ್ಲಿ ನಿರೂ ಪಿಸಿರುವನು. ಈ ನೀತಿಯ ಮುಖ್ಯ ಗುರಿ—ರಾಜಬಲ ಅಥವಾ ಪ್ರಭುತ್ವ ಪಾರಮ್ಯ. ಒಂದು ದೇಶದ ಪ್ರಭುತ್ವವು ಸ್ವತಂತ್ರ ವಾಗಿರಬೇಕಾದರೆ ಅದಕ್ಕೆ ಇತರ ದೇಶಗಳನ್ನು ಇದಿರಿಸುವಷ್ಟು ಬಲವಿರಬೇಕು. ಪ್ರಭುತ್ವನೀತಿಯೇ ಅಂತಿಮನೀತಿಯಾಗ ಬೇಕು; ಮತ ಧರ್ಮಗಳು ಅದರ ನೆರಳಲ್ಲಿ ಬಾಳಬೇಕು. ಮತವಾಗಲಿ ಧರ್ಮವಾಗಲಿ ರಾಜಕೀಯದಲ್ಲಿ ಒಡಕು ಹುಟ್ಟಿ ಸದಂತೆ, ಪ್ರಭುತ್ವದ ಬಲವನ್ನು ಕುಗ್ಗಿಸದಂತೆ ಅವುಗಳನ್ನು ಬಲವಾಗಿ ಅದುಮಿ ಇಟ್ಟಿರಬೇಕು. ವ್ಯವಹಾರಸೌಕರ್ಯದೃಷ್ಟಿ ಯಿಂದ ಅಂದರೆ ದೇಶದ ಸ್ವಾತಂತ್ರ್ಯ ಮತ್ತು ಏಳಿಗೆಯ ದೃಷ್ಟಿಯಿಂದ ಮತಧರ್ಮಗಳಿಗೆ ವಿರುದ್ಧವಾದ ನೀತಿಯನ್ನು ಅನುಸರಿಸಬೇಕಾದ ಆವಶ್ಯಕತೆ ಕಂಡುಬಂದಲ್ಲಿ ಅದನ್ನೇ ಪರಮ ನೀತಿಯಾಗಿ ಅನುಸರಿಸಬೇಕು. ರಾಜ್ಯವು ಬಲಗೊಳ್ಳಲು ರಾಜನು ಯಾರ ಪ್ರಾಣವನ್ನು ತೆಗೆಯಲೂ ಹಿಂಜರಿಯ ಬಾರದು, ಯಾವ ವಿಧವಾದ ಮೋಸಮಾಡಲೂ ಹಿಂತೆಗೆಯ ಬಾರದು. ಪಾಪಭೀತಿ ಎಂಬುದನ್ನು ತನ್ನಿಂದ ದೂರಮಾಡ ಬೇಕು. ಸಾವಿರ ಸುಳ್ಳನ್ನಾದರೂ ಹೇಳಿ ಒಂದು ಮದುವೆ

ಯನ್ನು ಮಾಡಿಸಬೇಕು ಎಂದು ನಮ್ಮಲ್ಲಿ ಜನರು ಹೇಳುವುದಿಲ್ಲವೇ ? ಹಾಗೆಯೇ ಸಾವಿರ ಕೊಲೆಗಳನ್ನು ಮಾಡಿ ಸಾಮ್ರಾಜ್ಯವನ್ನು ಸ್ಥಾಪಿಸಬೇಕು ಎಂಬುದು ಮ್ಯಾಕಿಯವೆಲ್ಲಿಯ ನೀತಿ.

ನಮ್ಮ ದೇಶದ ರಾಜನೀತಿಜ್ಞನಾದ ಕೌಟಿಲ್ಯನ ನೀತಿಗೆ ಇವನ ನೀತಿಯನ್ನು ಹೋಲಿಸುವುದುಂಟು. ಪ್ರಭುತ್ವಶಕ್ತಿಯೇ ದೇಶವಲ್ಲಿ ಪರಮ ಶಕ್ತಿಯಾಗಿರಬೇಕು, ರಾಜಕೀಯದಲ್ಲಿ ಮತಧರ್ಮಗಳಿಗಿಂತಲೂ ವ್ಯವಹಾರದೃಷ್ಟಿಯೇ ಮೇಲಾಗಬೇಕು ಎಂಬ ವಿಚಾರಗಳಲ್ಲಿ ಇಬ್ಬರಿಗೂ ಸಾಮ್ಯವಿದೆ. ಆದರೆ ಕೌಟಿಲ್ಯನ ಪ್ರತಿಭೆಗೂ ಮ್ಯಾಕಿಯವೆಲ್ಲಿಯ ಪ್ರತಿಭೆಗೂ ಅಜಗಜಾಂತರ ವ್ಯತ್ಯಾಸವಿದೆ. ಕೌಟಿಲ್ಯನ ರಾಜನೀತಿ ಮ್ಯಾಕಿಯವೆಲ್ಲಿಯ ತತ್ವಕ್ಕಿಂತಲೂ ಆಳವಾದುದು, ಮತ್ತು ವಿಶಾಲವಾದುದು. ಅಲ್ಲದೆ ಸಾಮಾನ್ಯವಾಗಿ ಅದು ಧರ್ಮಕ್ಕೆ ವಿರೋಧವಾದುದಲ್ಲ ; ಅದು ಬರಿಯ "ಉದ್ಯತದಂಡ" ಪ್ರಶಂಸೆಯೂ ಅಲ್ಲ. ರಾಜನು ಧರ್ಮಿಷ್ಠರನ್ನೂ ಯೋಗ್ಯರಾದ ಪ್ರಜೆಗಳನ್ನೂ ಸ್ವಲ್ಪವೂ ಹಿಂಸಿಸಕೂಡದು. ಹಾಗೆ ಮಾಡಿದರೆ ತಾನೂ ತನ್ನ ರಾಜ್ಯವೂ ಹಾಳಾಗುವುದು ನಿಶ್ಚಯ. ರಾಜನು ಪ್ರತಿ ನಿಮಿಷದಲ್ಲೂ ತನ್ನ ರಾಗದ್ವೇಷಗಳನ್ನು ತುಳಿಯುತ್ತಿರಬೇಕು, ಯುಕ್ತವಾದ ರೀತಿಯಲ್ಲಿ ಮಾತ್ರ ದಂಡವನ್ನು ಉಪಯೋಗಿಸಬೇಕು. ಶಿಷ್ಟರನ್ನು ಪಾಲಿಸುವಾಗ ಅವನ ಧರ್ಮಚೈತನ್ಯ ಬಹು ಎಚ್ಚತ್ತಿರಬೇಕು. ದುಷ್ಟರನ್ನು ನಿಗ್ರಹಿಸುವಾಗ, ಶತ್ರುವನ್ನು ಗೆಲ್ಲುವಾಗ ದಯಾದಾಕ್ಷಿಣ್ಯಗಳಿರಬಾರದು ; ಸುಳ್ಳುಹೇಳಬಾರದು, ಮೋಸಮಾಡಬಾರದು ಎಂಬ ಧಾರ್ಮಿಕ ಭಾವಗಳನ್ನು ಬದಿಗಿಡಬೇಕು ; ದುಷ್ಟಪತನ, ಶತ್ರುನಾಶ—ಇವನ್ನೇ ಗುರಿಯಿಟ್ಟು ಸಾಧಿಸಬೇಕು. ಇದು ಧರ್ಮರಾಜ್ಯ ನೀತಿಯೂ ಅಲ್ಲ, ರಾಮ

ರಾಜ್ಯತತ್ವವೂ ಅಲ್ಲ; ಇದು ಹಿರಿಯವೆನ್ನಿಸಿಕೊಂಡಿರುವ ರಾಷ್ಟ್ರಗಳು ಇಂದು ಆಚರಣೆಯಲ್ಲಿಟ್ಟುಕೊಂಡಿರುವ ತತ್ವ. ಈ ತತ್ವದಿಂದಲೇ ಈ ರಾಷ್ಟ್ರಗಳು ಪ್ರಬಲವಾಗಿರುವುದು; ತಮ್ಮ ಪ್ರಾಬಲ್ಯವನ್ನು ಉಳಿಸಿಕೊಂಡಿರುವುದು. ಆದರೆ ಇಂದಿನ ರಾಜಕಾರ್ಯಪಟುಗಳು ಮಾತ್ರ ಮುಚ್ಚುಮರೆಯಿಲ್ಲದೆ ತಮ್ಮ ಅಂತರಂಗವನ್ನು ಹೇಳಿಬಿಡುವುದಿಲ್ಲ. ಸಾಧ್ಯವಾದ ಮಟ್ಟಿಗೂ ಅವರು ತಮ್ಮ ನೀತಿಗೆ ಧರ್ಮದ ಬಣ್ಣವನ್ನು ಕೊಡಲು ಪ್ರಯತ್ನಪಡುತ್ತಾರೆ. ಆದರೆ ಕೌಟಿಲ್ಯನು ಮಾತ್ರ ಇದನ್ನು ಸ್ಪಷ್ಟವಾಗಿ ಸಾರಿರುತ್ತಾನೆ.

ಮ್ಯಾಕಿಯವೆಲ್ಲಿಯ ರಾಜಕೀಯ ಅಭಿಪ್ರಾಯಗಳನ್ನು ವಿದ್ವಾಂಸರು ಬಹುವಾಗಿ ಖಂಡಿಸಿರುತ್ತಾರೆ. ಗುರಿ ಒಳ್ಳೆಯದಾಗಿದ್ದರೆ ಅದನ್ನು ಸಾಧಿಸಲು ಹೂಡುವ ಉಪಾಯ ಹೇಗಾದರೂ ಇರಬಹುದೆಂಬ ವಾದ ಬಹಳ ಅಪಾಯಕರವೆಂಬುದು ಒಂದು ಆಕ್ಷೇಪ. ಧರ್ಮದೃಷ್ಟಿಯಿಂದ ನಿಷಿದ್ಧವಾದುದು ರಾಜಕೀಯ ದೃಷ್ಟಿಯಿಂದಲೂ ನಿಷಿದ್ಧವಾದುವೇ ಎಂಬುದು ಇವರ ಮತ. ಮ್ಯಾಕಿಯವೆಲ್ಲಿಯು ಕಾಪಟ್ಯಕ್ಕೂ ರಾಜತಂತ್ರಕ್ಕೂ ಇರುವ ಸೂಕ್ಷ್ಮವಾದ ವ್ಯತ್ಯಾಸವನ್ನು ಗಮನಿಸದಿರುವುದು ಇನ್ನೊಂದು ಆಕ್ಷೇಪ.

ಈ ಸಂದರ್ಭದಲ್ಲಿ ಮುಖ್ಯವಾಗಿ ನಾವು ಗಮನಿಸಬೇಕಾದುದು ಇಷ್ಟು. ಧರ್ಮದ ಹೆಸರಿನಲ್ಲಿ ಲೌಕಿಕ ವ್ಯವಹಾರವು ಕೆಟ್ಟುಹೋಗಬಾರದು. ಹಾಗೆಯೇ ರಾಷ್ಟ್ರದ ಪ್ರಾಬಲ್ಯದ ಹೆಸರಿನಲ್ಲಿ ವ್ಯಕ್ತಿಗಳ ಧಾರ್ಮಿಕ ಮತ್ತು ಮತಜೀವನಕ್ಕೆ ಚ್ಯುತಿ ಬರಬಾರದು. ಲೌಕಿಕ ದೃಷ್ಟಿಯಿಂದ ರಾಷ್ಟ್ರದ ಐಕಮತ್ಯವೂ ಸ್ವಾತಂತ್ರ್ಯವೂ ಎಷ್ಟುಮುಖ್ಯವಾದುವೋ, ಧಾರ್ಮಿಕ

ದೃಷ್ಟಿಯಿಂದ ನ್ಯಾಯವೂ ಸತ್ಯವೂ ಅಷ್ಟೇ ಮುಖ್ಯವಾದುವು. ಇವೆರಡನ್ನೂ ಸಾಧಿಸುವ ಸಮನ್ವಯ ದೃಷ್ಟಿ ಆವಶ್ಯಕ.

## II. ಬೋಡಿ಼ ಮತ್ತು ಗ್ರೋಷಿಯಸ್

## ಪ್ರಭುತ್ವ ತತ್ವ

ಪ್ರಜೆಗಳಿಲ್ಲದೆ ರಾಜ್ಯವಿಲ್ಲ. ಪ್ರಜೆಗಳಿಗಾಗಿ ರಾಜ್ಯ. ಪ್ರಜೆಗಳ ಸೌಖ್ಯ ಶಾಂತಿಗಳನ್ನು ಕಾಪಾಡುವುದು ರಾಜ್ಯಸಂಸ್ಥೆಯ ಮುಖ್ಯ ಕರ್ತವ್ಯ. ಯಾವಾಗಲೂ ಶತ್ರುಭಯವಿದ್ದರೆ ಜನರು ನೆಮ್ಮದಿಯಾಗಿ ಬಾಳಲಾರರು. ರಾಷ್ಟ್ರವನ್ನು ಶತ್ರುಗಳ ಬಾಧೆಯಿಂದ ಕಾಪಾಡಲು ಶಕ್ತಿ ಬೇಕು; ಇದೇ ದಂಡಶಕ್ತಿ. ಎಲ್ಲರ ಕೈಯಲ್ಲೂ ಈ ದಂಡವಿದ್ದರೆ ರಾಜ್ಯದಲ್ಲಿ ಕ್ಷೋಭೆ ಏಳುವುದು. ಇದನ್ನು ಕೇಂದ್ರೀಕರಿಸಿ ಕ್ರಮವಾದ ರೀತಿಯಲ್ಲಿ ಉಪಯೋಗಿಸುವ ಅಧಿಕಾರ ಒಬ್ಬಾತನಲ್ಲಿ ಅಥವಾ ಒಂದು ಸಂಸ್ಥೆಯಲ್ಲಿ ಸಮಾವೇಶವಾಗಿರಬೇಕು. ಇಂತಹ ಅಧಿಕಾರಕ್ಕೆ ಪ್ರಭುತ್ವವೆಂದು ಹೆಸರು. ರಾಜಕೀಯದಲ್ಲಿ ಇದೇ ಪರಮ ಅಧಿಕಾರವಾಗಿರಬೇಕು. ಈ ಅಧಿಕಾರವು ಒಬ್ಬನಲ್ಲಿ ಅಥವಾ ಒಂದು ಮಂಡಲಿಯಲ್ಲಿ ಕೇಂದ್ರೀಕೃತವಾಗಿದ್ದರೂ ಅದರ ಪರ್ವ ದೇಶದಾದ್ಯಂತ್ಯವೂ ಆವರಿಸಬೇಕು. ಹೀಗೆ ಆಗಬೇಕಾದರೆ ಪ್ರಭುತ್ವದವರು ತಮಗೆ ವಿಧೇಯರಾದ ಸಾವಿರಾರು ಅಧಿಕಾರಿಗಳನ್ನು ನಿಯಾಮಕ ಮಾಡಿಕೊಂಡು ಅವರ ಮೂಲಕ ತಮ್ಮ ಅಧಿಕಾರವು ದೇಶದ ಆದ್ಯಂತವೂ ವ್ಯಾಪಿಸಿರುವಂತೆ ಮಾಡಬೇಕು. ಈ ಅಧಿಕಾರ ಎರಡು ವಿಧವಾಗಿದೆ; ಒಂದು ವಿಧಾಯಕಾಧಿಕಾರ, ಇನ್ನೊಂದು ನಿರೋಧಕಾಧಿಕಾರ. ದೇಶದ ನೆಮ್ಮದಿಗೆ ಬೇಕಾದ ಕಾನೂನನ್ನು ಮಾಡುವುದು, ಅದಕ್ಕೆ ಪ್ರತಿಬಂಧಕರಾದವರನ್ನು ದಂಡಿಸು

ವುದು, ಎಲ್ಲವೂ ಪ್ರಭುತ್ವದ ವಿಧಿ ನಿಷೇಧಗಳಿಗೆ ಒಳಪಡು ವುವು. ಆದರೆ ಪ್ರಭುತ್ವವು ಮಾತ್ರ ಎಲ್ಲ ವಿಧಿ ನಿಷೇಧಗಳಿಗೂ ಮಿಾರಿದುದು. ಇಂಥ ಪ್ರಭುತ್ವವಿಲ್ಲದ ರಾಷ್ಟ್ರ ರಾಷ್ಟ್ರವಲ್ಲ. ರಾಷ್ಟ್ರವು ರಾಷ್ಟ್ರವೆನ್ನಿಸಿಕೊಳ್ಳಬೇಕಾದರೆ ಅದರಲ್ಲಿ ಇಂಥ ಪರಮ ಪ್ರಭುತ್ವವಿರಬೇಕು. ಇದನ್ನು ವ್ಯಾಕಿಯವೆಲ್ಲಿಯು ಸೂಚಿಸಿದ್ದನು. ಈ ಸಿದ್ಧಾಂತವನ್ನು ವಿಸ್ತರಿಸಿ ಯುಕ್ತಾಯುಕ್ತ ವಿವೇಚನೆಯೊಡನೆ ಪ್ರತಿಪಾದಿಸಿದವನು ೧೬ನೆಯ ಶತಮಾನದ ಜೀನ್‌ಬೋಡಿನ್ ಎಂಬ ಫ್ರಾನ್ಸಿನ ರಾಜನೀತಿಜ್ಞ. ಇವನು ರಾಷ್ಟ್ರತತ್ವ ಚರಿತ್ರೆಯಲ್ಲಿ ಪ್ರಭುತ್ವ ಸಿದ್ಧಾಂತದ ಜನಕನೆಂದು ಹೆಸರುವಾಸಿಯಾಗಿರುತ್ತಾನೆ.

ಬೋಡಿನ್ನನು ಕೇವಲ ತಾತ್ವಿಕ ದೃಷ್ಟಿಯಿಂದ ಪ್ರಭುತ್ವ ಸಿದ್ಧಾಂತವನ್ನು ವಿಮರ್ಶಿಸಿ ರಾಜಕೀಯ ನೀತಿಗೆ ಒಂದು ಹೊಸ ಕಳೆಯನ್ನು ಕೊಟ್ಟನು. ರಾಷ್ಟ್ರದ ಸ್ವಾತಂತ್ರ್ಯವನ್ನು ಅಳೆಯಲು ಅಳತೆಯ ಕೋಲೊಂದನ್ನು ನಿರ್ಮಿಸಿದನು. ಇವರ ಸಹಾಯದಿಂದ ಒಂದು ರಾಷ್ಟ್ರವು ನಿಜವಾಗಿ ಸ್ವತಂತ್ರವೇ ಇಲ್ಲವೇ ಎಂಬುದನ್ನು ತೀರ್ಮಾನಿಸಬಹುದು. ಪ್ರಭುತ್ವವು ರಾಜ ಪ್ರಭುತ್ವವಾಗಬಹುದು, ಅಥವಾ ಪ್ರಜಾಪ್ರಭುತ್ವವಾಗಬಹುದು. ಪ್ರಭುತ್ವವು ಯಾವುದರಲ್ಲೇ ಕೇಂದ್ರೀಕೃತವಾಗಿರಲಿ ಅದು ಮೇಲೆ ವಿವರಿಸಿದ ಲಕ್ಷಣಗಳನ್ನು ಪಡೆದಿರಬೇಕು. (೧) ಅದು ಸ್ವತಂ ತ್ರಾಧಿಕಾರವಾಗಿರಬೇಕು, ಹೊರದೇಶದ ಎಳೆತಕ್ಕೆ ಅಥವಾ ಸೆಳೆ ತಕ್ಕೆ ಸ್ವಲ್ಪವೂ ಒಳಪಡಕೂಡದು. (೨) ಅದರಲ್ಲಿ ಒಗ್ಗಟ್ಟು ಇರಬೇಕು, ಒಬ್ಬನಲ್ಲಿರಲಿ ಸಾವಿರಜನರಲ್ಲಿರಲಿ, ಅದರಲ್ಲಿ ಒಡಕು ಇರಕೂಡದು. ಒಂದು ದೇಶದಲ್ಲಿ ಎರಡು ಪ್ರಭುತ್ವ ಗಳಿದ್ದರೆ ಅಲ್ಲಿ ಅಂತಃಕಲಹ ತಪ್ಪಿದುದಲ್ಲ. ದೇಶದೊಳಗೆ ಅದು

ಅಭೇದ್ಯವಾದುದಾಗಿಯೂ, ದೇಶದ ಹೊರಗೆ ಅಜೇಯವಾದು ದಾಗಿಯೂ ಇದ್ದರೆ ಆಗ ಅದು ಹದಿನಾರಾಣೆಯ ಪ್ರಭುತ್ವವೆನ್ನಿಸಿಕೊಳ್ಳುವುದು. ಇಂದಿನ ವಿಶಿ (Vichy) ಪ್ರಭುತ್ವವನ್ನು ಉದಾಹರಣೆಗಾಗಿ ತೆಗೆದುಕೊಂಡು ಪ್ರಭುತ್ವ ಲಕ್ಷಣವನ್ನು ಸ್ಪಷ್ಟಪಡಿಸಬಹುದು. ಈಗ (೧೯೪೧) ಫ್ರಾನ್ಸಿನ ವಿಶಿ ಸರ್ಕಾರವು ಪ್ರಭುತ್ವ ಉಳ್ಳುದೇ ಎಂದು ಪ್ರಶ್ನಿಸಿದರೆ ಇಲ್ಲವೆಂದೇ ಹೇಳಬೇಕಾಗುವುದು. ಏಕೆಂದರೆ ವಿಶಿ ಸರ್ಕಾರಕ್ಕೆ ಸ್ವತಂತ್ರ ಸರ್ಕಾರವಿಲ್ಲ. ಅದು ಜರ್ಮನ ಪ್ರಭುತ್ವದ ಆಡಳಿತಕ್ಕೆ ಒಳಗಾಗಿದೆ. ತನ್ನದಲ್ಲದ, ಅಂದರೆ ಬೇರೆಯವರ, ಅಧಿಕಾರವನ್ನು ಅದು ಎಂದು ಒಪ್ಪಿಕೊಂಡಿತೋ ಅಂದು ಫ್ರಾನ್ಸ್ ತನ್ನ ಪ್ರಭುತ್ವಕ್ಕೆ ತಿಲಾಂಜಲಿ ಕೊಟ್ಟಂತಾಯಿತು. ಹೀಗೆಯೇ ಪರಾಧೀನವಾದ ಇತರ ಐರೋಪ್ಯ ರಾಷ್ಟ್ರಗಳೂ ತಮ್ಮ ಪ್ರಭುತ್ವವನ್ನು ಕಳೆದುಕೊಂಡಿವೆಯೆಂದು ಭಾವಿಸಬೇಕಾಗಿದೆ. ಹದಿನಾರಾಣೆಯ ಪ್ರಭುತ್ವಕ್ಕೆ ಇಂದು ಜರ್ಮನ, ಇಂಗ್ಲಿಷ್ ಮತ್ತು ರಷ್ಯಾ ಪ್ರಭುತ್ವಗಳು ಉತ್ತಮ ನಿದರ್ಶನಗಳು.

ಹೀಗೆ, ಹದಿನೇಳನೆಯ ಶತಮಾನದಲ್ಲಿ ಬೋಡಿನ್ ಪ್ರತಿಪಾದಿಸಿದ ಪ್ರಭುತ್ವತತ್ವವು ಇಂದಿನವರೆಗೂ ಅಚ್ಚಳಿಯದೆ ರಾಜಕೀಯನೀತಿಯ ಪ್ರಥಮತತ್ವವಾಗಿ ನಿಂತಿದೆ.

ಆದರೆ ಇತ್ತೀಚಿನ ಕೆಲವು ಆಧುನಿಕ ರಾಜ್ಯಶಾಸ್ತ್ರಜ್ಞರು ಕೆಲವು ಕಾರಣಗಳಿಂದ ಈ ಪ್ರಭುತ್ವಸಿದ್ಧಾಂತವನ್ನು ಒಪ್ಪುವುದಿಲ್ಲ. ಪ್ರಭುತ್ವವು ಏಕಮುಖವಾಗಿಯೂ ಏಕಕೇಂದ್ರವುಳ್ಳದ್ದಾಗಿಯೂ ಇರುವುದು ಒಂದು ದೋಷವೆಂದೂ, ಇದು ಬಹುಮುಖಗಳುಳ್ಳದ್ದಾಗಿಯೂ ಅನೇಕ ಕೇಂದ್ರಗಳುಳ್ಳದ್ದಾಗಿಯೂ ಇರಬೇಕೆಂಬದೂ ವಾದ ತಲೆಯೆತ್ತುತ್ತಿದೆ. ಪ್ರಭುತ್ವವು ಬರಿಯ

ನ್ಯಾಯವಿಧಾಯಕ ದುಷ್ಟನಿರೋಧಕ ಪ್ರಭುತ್ವವಾಗಿದ್ದರೆ ಸಾಲದು. ಅದು ದೇಶದ ಆರ್ಥಿಕಶಕ್ತಿಯನ್ನೂ, ಸಾಮಾಜಿಕ ಬಲವನ್ನೂ, ಧಾರ್ಮಿಕಸತ್ವವನ್ನೂ ಗಳಿಸುವ ಪ್ರಭುತ್ವವಾಗಿರ ಬೇಕು. ಆದುದರಿಂದ ಅದಕ್ಕೆ ಅನೇಕ ಕೇಂದ್ರಗಳಿರಬೇಕು. ಆರ್ಥಿಕಸಂಸ್ಥೆಗಳ ಒಂದು ಕೇಂದ್ರವೂ, ಸಾಮಾಜಿಕ ಸಂಸ್ಥೆಗಳ ಇನ್ನೊಂದು ಕೇಂದ್ರವೂ, ಧಾರ್ಮಿಕಸಂಸ್ಥೆಗಳ ಮತ್ತೊಂದು ಕೇಂದ್ರವೂ ಇರಬೇಕು. ಆದರೆ ಏಕಕೇಂದ್ರ ಪ್ರಭುತ್ವತತ್ವಕ್ಕೆ ದೊರೆತಿರುವಷ್ಟು ಬಹುಮತ ಈ ವಾದಕ್ಕೆ ದೊರೆತಿಲ್ಲ. ಇದಕ್ಕೆ ಕಾರಣವೇನೆಂದರೆ ಈಗಿನ ಪರಿಸ್ಥಿತಿಗಳಲ್ಲಿ ಇಂಥ ಪ್ರಭುತ್ವವು ಕಾರ್ಯರೂಪಕ್ಕೆ ಬರುವುದು ಕಷ್ಟಸಾಧ್ಯವಾಗಿರುವುದೇ ಆಗಿದೆ. ಹೀಗೆಂದಮಾತ್ರಕ್ಕೆ ಸರ್ವಾಧಿಕಾರಪ್ರಭುತ್ವವೂ, ಬಂಡವಾಳ ಗಾರರ ದಾಸ್ಯದಲ್ಲಿರುವ ಪ್ರಭುತ್ವವೂ, ಸೈನ್ಯಬಲಪ್ರಧಾನವಾದ ಯೋಧಪ್ರಭುತ್ವವೂ ಸಾಮಾಜಿಕಸಂಸ್ಥೆಗಳ ಸತ್ವವನ್ನೆಲ್ಲಾ ಹೀರಿ ಅವುಗಳನ್ನು ನಿತ್ರಾಣವಾಗಿ ಮಾಡುವುದು ನ್ಯಾಯವೆಂದು ಹೇಳಲಾಗುವುದಿಲ್ಲ.

ಪ್ರಭುತ್ವಶಕ್ತಿಯು ಬಹುಕೇಂದ್ರವಾಗಿರಬೇಕೆಂಬ ವಾದ ಕೇವಲ ಇಂದಿನದೇ ಅಲ್ಲ. ಅದನ್ನು ಹದಿನೇಳನೆಯ ಶತ ಮಾನದಲ್ಲೇ ಹ್ಯೂಗೋ ಗ್ರೋಷಿಯಸ್ ಎಂಬ ರಾಜಕೀಯ ತಾತ್ವಿಕನು ಸೂಚಿಸಿದ್ದನು. ಸ್ವತಂತ್ರವಾದ ಅಧಿಕಾರವೇ ನಿಜ ವಾದ ಪ್ರಭುತ್ವ ಎಂಬ ಜೋಡಿನಿನ ತತ್ವವನ್ನು ಗ್ರೋಷಿಯಸ್ಸನು ಒಪ್ಪಿಕೊಂಡರೂ ಆ ಪ್ರಭುತ್ವವು ಏಕಕೇಂದ್ರದಲ್ಲಿ ಅಡ ಗಿರಬೇಕೆಂಬುದನ್ನು ಒಪ್ಪಲಿಲ್ಲ. ಅದು ಅನೇಕ ಕೇಂದ್ರಗಳುಳ್ಳ ದ್ದಾಗಿರಬೇಕೆಂಬುದು ಗ್ರೋಷಿಯಸ್ಸಿನ ವಾದ. ಇದೂ ಅಲ್ಲದೆ ಪ್ರಭುತ್ವಶಕ್ತಿಯು ಜನತೆಯ ಸಮ್ಮತಿಯಮೇಲೆ ನಿಲ್ಲಬೇಕು.

ಪ್ರಭುತ್ವಶಕ್ತಿಯು ಮನುಷ್ಯನ ಸಾಮಾಜಿಕ ಜೀವನದಲ್ಲಿ ಹುಟ್ಟಿದ ನೈಸರ್ಗಿಕಶಕ್ತಿ ಎಂದು ಭಾವಿಸಿದುದು ಇವನ ರಾಜಕೀಯ ತತ್ವದ ಇನ್ನೊಂದು ವೈಶಿಷ್ಟ್ಯ. ಮನುಷ್ಯನು ಸಹಜವಾಗಿ ಸಮಾಜಜೀವಿಯಾದದ್ದರಿಂದ ಸಣ್ಣ ಕೂಟಗಳಿಂದ ಪ್ರಾರಂಭಮಾಡಿ ನಾಗರಿಕತೆಯ ಹಂತವನ್ನು ಹತ್ತುತ್ತಾ ಕೊನೆಗೆ ರಾಜ್ಯಸಂಸ್ಥೆ ಎಂಬ ವಿಶಾಲವಾದ ಸಮಾಜವನ್ನು ಏರ್ಪಡಿಸಿಕೊಳ್ಳುವನು. ಸಮಾಜದಲ್ಲಿ ವ್ಯಕ್ತಿಗಳಿಗಿರುವ ಪರಸ್ಪರ ಸಂಪರ್ಕಗಳನ್ನು ನ್ಯಾಯಬದ್ಧವಾಗಿ ನಡಸುವ ಏರ್ಪಾಡಿಗೆ ವ್ಯಕ್ತಿಗಳೆಲ್ಲರೂ ಒಪ್ಪಿಗೆಯನ್ನೀಯುವರು. ಇದರಿಂದ ಪ್ರಭುತ್ವಶಕ್ತಿಯು ನಿರ್ಮಾಣವಾಗುವುದು. ಜನತೆಯು ಈ ಪ್ರಭುತ್ವಶಕ್ತಿಯನ್ನು ತನ್ನಲ್ಲಿಯೇ ಉಳಿಸಿಕೊಂಡು ಜವಾಬ್ದಾರಿಯುಳ್ಳ ನ್ಯಾಯಾಧೀಶರ ಮೂಲಕ ಸಮಾಜದಲ್ಲಿ ನ್ಯಾಯವನ್ನು ಸಲ್ಲಿಸುವ ಏರ್ಪಾಡನ್ನು ಮಾಡಬಹುದು. ಅಥವಾ ಪ್ರಭುತ್ವ ಶಕ್ತಿಯನ್ನು ತಮ್ಮಲ್ಲಿ ಶ್ರೇಷ್ಠನೆಂದು ಎಣಿಸಲ್ಪಟ್ಟ ಒಬ್ಬ ರಾಜನಿಗೆ ಧಾರೆಯೆರೆದು ಆತನ ಶಾಸನಕ್ಕೆ ಒಳಪಡುವ ಏರ್ಪಾಡು ಮಾಡಬಹುದು. ಇದನ್ನು ರಾಜನು ದುರುಪಯೋಗಪಡಿಸಿದರೆ ಅವನಿಂದ ಪುನಃ ಜನತೆಯು ಪ್ರಭುತ್ವಶಕ್ತಿಯನ್ನು ಹಿಂತೆಗೆದುಕೊಳ್ಳಬಹುದು.

ಅಂತರ್ರಾಷ್ಟ್ರೀಯ ತತ್ವವನ್ನು ರಾಜನೀತಿಯ ಮುಖ್ಯವಾದ ಅಂಗವನ್ನಾಗಿ ಪ್ರತಿಪಾದಿಸಿದ ಹಿರಿಮೆ ಗ್ರೋಷಿಯಸನಿಗೆ ಸೇರಿದೆ. ಗ್ರೋಷಿಯಸ್ಸನನ್ನು ಅಂತರ್ರಾಷ್ಟ್ರೀಯ ವಾದದ ಜನ್ಮದಾತನೆಂದು ಚರಿತ್ರಕಾರರು ವರ್ಣಿಸಿರುವರು. ಅಂತರ್ರಾಷ್ಟ್ರೀಯ ಶಾಸನಶಾಸ್ತ್ರವನ್ನೂ ನಿರ್ಮಾಣಮಾಡಿದನೆಂದು ಹೆಸರುವಾಸಿಯಾಗಿದ್ದಾನೆ. ರಾಷ್ಟ್ರಗಳೆಲ್ಲಾ ಒಂದು ನ್ಯಾಯಸಂಸ್ಥೆಗೆ ಕಟ್ಟುಬಿದ್ದು ಶಾಂತಿಸಾಧನೆ ಮಾಡಬೇಕೆಂಬುವೇ ಇವನ ತತ್ವ.

ರಾಷ್ಟ್ರ ರಾಷ್ಟ್ರಗಳ ಪರಸ್ಪರ ಸಂಬಂಧಗಳನ್ನು ನಿರ್ಧರಿಸುವ ಅಂತರ್ರಾಷ್ಟ್ರೀಯ ವಿಧಿಯನ್ನೂ ಅಂತರ್ರಾಷ್ಟ್ರೀಯ ಕಾನೂನನ್ನೂ ಒಪ್ಪಿದರೆ ಪ್ರಭುತ್ವ ಪಾರಮ್ಯಕ್ಕೆ ಹಾನಿಬರುವುದಿಲ್ಲವೆ ಎಂದು ಪ್ರಶ್ನೆ ಹುಟ್ಟುವುದು ಸಹಜವಾಗಿದೆ. ಇಂಥ ಸಂಸ್ಥೆಯು ರಾಷ್ಟ್ರಗಳ ಒಪ್ಪಿಗೆಯಿಂದಲ್ಲದೆ ಯಾವುದೋ ಒಂದು ರಾಷ್ಟ್ರದ ಬಲಾತ್ಕಾರದಿಂದ ಏರ್ಪಟ್ಟರೆ ಅಂಥ ಅಂತರ್ರಾಷ್ಟ್ರೀಯ ಸಂಸ್ಥೆಯಿಂದ ಅದನ್ನು ಸೇರಿದ ಸಣ್ಣ ಸಣ್ಣ ರಾಷ್ಟ್ರಗಳ ಪ್ರಭುತ್ವ ಪಾರಮ್ಯಕ್ಕೆ ಧಕ್ಕೆ ಬರುವುದು ಖಂಡಿತ. ಆದರೆ ರಾಷ್ಟ್ರಗಳೆಲ್ಲಾ ಸಮಾನ ರಾಷ್ಟ್ರಗಳಾಗಿದ್ದು, ನ್ಯಾಯಪರವಾದುವುಗಳಾಗಿದ್ದು ತಾವಾಗಿಯೇ ಸ್ವತಂತ್ರವಾಗಿ ಒಪ್ಪಿ ಅಂತರ್ರಾಷ್ಟ್ರೀಯ ಸಂಸ್ಥೆಗೆ ಸೇರಿದರೆ ಅವು ತಮ್ಮ ದೇಶದ ಒಳ ಆಡಳಿತದಲ್ಲಿ ತಮ್ಮ ಪ್ರಭುತ್ವ ಪಾರಮ್ಯವನ್ನು ಉಳಿಸಿಕೊಂಡೇ ಸೇರುವುವು.

ಗ್ರೋಷಿಯಸನ ಧ್ಯೇಯವನ್ನು ಸುಲಭವಾಗಿ ಸಾಧಿಸಬಹುದೆಂದು ಯಾರೂ ಹೇಳಲಾರರು. ರಾಷ್ಟ್ರಗಳಿಗೆ ಅಂತರ್ರಾಷ್ಟ್ರೀಯ ಮನೋಭಾವ ಸುಲಭವಾಗಿ ಬರತಕ್ಕದ್ದಲ್ಲ. ಇಂಥ ಧ್ಯೇಯಸಾಧನೆಗೆ ಬೇಕಾದ ಸತ್ವಶುದ್ಧಿಯನ್ನು ಪ್ರಪಂಚದ ರಾಷ್ಟ್ರಗಳು ಇನ್ನೂ ಪಡೆದಿಲ್ಲವೆಂದು ಬೇರೆ ಹೇಳಬೇಕಾಗಿಲ್ಲ. ಹೀಗೆ ಹೇಳಿದಾಗ ಇಂದಿನ ರಾಷ್ಟ್ರಗಳು ಇನ್ನೂ ಅಂತರ್ರಾಷ್ಟ್ರೀಯ ವಿಚಾರಗಳಲ್ಲಿ ಅನಾಗರಿಕ ಸ್ಥಿತಿಯಲ್ಲಿವೆ, ಎಂದ ಹಾಗಾಯಿತೇ ಹೊರತು ಗ್ರೋಷಿಯಸನ ಧ್ಯೇಯ ಅಸಾಧುವಾದುದೆಂದು ಹೇಳಿದ ಹಾಗಾಗಲಿಲ್ಲ. ಗ್ರೋಷಿಯಸನ ಅಂತರ್ರಾಷ್ಟ್ರೀಯ ಧ್ಯೇಯ ಇಂದಿಗೂ ನ್ಯಾಯ ಸಮ್ಮತವಾಗಿದೆ; ಆದರೆ ಅದನ್ನು ಸಾಧಿಸಲು ಬೇಕಾದ ಸತ್ವಶುದ್ಧಿ ರಾಷ್ಟ್ರಗಳಲ್ಲಿ ಇನ್ನೂ ಮೂಡಿಲ್ಲ.

# III. ಹಾಬ್ಸ್, ಲಾಕ್ ಮತ್ತು ರೂಸೋ

## ರಾಷ್ಟ್ರನಿರ್ಮಾಣ ಮತ್ತು ಸಾಮಾಜಿಕ ಒಡಂಬಡಿಕೆ

ಪ್ರಭುತ್ವವು ಅನಾದಿಯಾಗಿ ನಡೆದುಕೊಂಡು ಬಂದುದೇ ಅಥವಾ ಜನರು ತಮ್ಮ ಕ್ಷೇಮಲಾಭಕ್ಕಾಗಿ ಮಾಡಿಕೊಂಡ ಒಂದು ಒಡಂಬಡಿಕೆಯ ಪರಿಣಾಮವೇ? ಈ ಪ್ರಶ್ನೆಯೂ ಹದಿಮೂರ ನೆಯ ಶತಮಾನದಲ್ಲೇ ರಾಜಕೀಯ ತತ್ವದಲ್ಲಿ ತಲೆಹಾಕಿತು. ಲಾಂಗ್ವೆ ಮತ್ತು ಜೆಲ್ಲಾಪರ್ಟ್ರಿಮ್ ಇವರು ಕ್ರೈಸ್ತ ಧರ್ಮ ದಲ್ಲಿ ಮತ್ತು ರೋಮನ್ ನ್ಯಾಯದಲ್ಲಿ ಅಡಗಿದ್ದ ಒಡಂಬಡಿಕೆಯ ತತ್ವವನ್ನು ರಾಜಕೀಯ ತತ್ವವಾಗಿ ಉಪಯೋಗಿಸಿಕೊಂಡರು. ಆದರೆ ಒಡಂಬಡಿಕೆಯ ತತ್ವವು ಪ್ರಾಬಲ್ಯಕ್ಕೆ ಬಂದುದು ಹದಿನೇಳ ನೆಯ ಮತ್ತು ಹದಿನೆಂಟನೆಯ ಶತಮಾನಗಳಲ್ಲಿ. ಇವರ ಪ್ರಸಿದ್ಧ ಪ್ರತಿಪಾದಕರು ಇಂಗ್ಲೆಂಡಿನ ರಾಜಕೀಯ ತಾತ್ವಿಕರಾದ ಹಾಬ್ಸ್, ಲಾಕ್, ಮತ್ತು ಫ್ರಾನ್ಸಿನ ಸಾಹಿತಿಯೂ ತಾತ್ವಿಕನೂ ಆದ ರೂಸೋ.

ಇವರ ರಾಜಕೀಯ ತತ್ವಕ್ಕೆ ಎರಡು ಭಾವಗಳು ಮೂಲ ವಾದುವು: ೧. ಅರಾಜಕೀಯಸ್ಥಿತಿ ಅಥವಾ ಸ್ವಾಭಾವಿಕ ಪರಿಸ್ಥಿತಿ ಮತ್ತು ಆಜನ್ಮಸಿದ್ಧವಾದ ಹಕ್ಕುಗಳು. ೨. ರಾಷ್ಟ್ರವೂ ಪ್ರಭುತ್ವವೂ ಹುಟ್ಟಿದುದು ಸಾಮಾಜಿಕ ಒಡಂಬಡಿಕೆಯಿಂದ.

ಮಾನವನು ಸ್ವಾಭಾವಿಕವಾಗಿ ರಾಜಕೀಯ ಪ್ರಾಣಿ. ರಾಜಕೀಯದ ಮೂಲಕ ತನ್ನ ಜೀವನವನ್ನು ಸುಗಮವಾಗಿ ಮಾಡಿಕೊಳ್ಳುವ ಹಕ್ಕುಬಾಧ್ಯತೆಗಳು ಅವನಿಗೆ ಸ್ವಾಭಾವಿಕ ವಾದುವು ಎಂಬ ಅರಿಸ್ಟಾಟಲಿನ ತತ್ವವನ್ನು ಈಗಾಗಲೇ ಪರಿ ಚಯ ಮಾಡಿಕೊಂಡಿದ್ದೇವಷ್ಟೆ. ಇಲ್ಲಿ "ಸ್ವಾಭಾವಿಕವಾಗಿ"

ಎಂಬ ಪದವನ್ನು ನ್ಯಾಯವಾದುದು, ಯುಕ್ತವಾದುದು, ಆವಶ್ಯಕವಾದುದು, ಬುದ್ಧಿಸಮ್ಮತವಾದುದು ಎಂಬ ಅರ್ಥದಲ್ಲಿ ಅವನು ಉಪಯೋಗಿಸಿರುವನು. ಆದರೆ ಹಾಬ್ಸ್, ಲಾಕ್, ರೂಸೋ ಇವರು ಸಮಾಜದ ಸ್ವಾಭಾವಿಕ ಪರಿಸ್ಥಿತಿ, ಮಾನವನ ಸ್ವಾಭಾವಿಕ ಹಕ್ಕುಗಳು ಎಂಬ ಪದಗಳನ್ನು ಅರಾಜಕೀಯ ಮಾನವ ಸ್ಥಿತಿ, ಆ ಸ್ಥಿಯಲ್ಲಿ ಮಾನವನು ಪಡೆದಿದ್ದ ಹಕ್ಕುಗಳು ಎಂಬ ಅರ್ಥದಲ್ಲಿ ಉಪಯೋಗಿಸಿದ್ದಾರೆ. ಒಂದು ಅರ್ಥದಲ್ಲಿ ಸ್ವಾಭಾವಿಕವಾದುವು ಎಂದರೆ ಬುದ್ಧಿ ಸಮ್ಮತವಾದುವು; ಇನ್ನೊಂದು ಅರ್ಥದಲ್ಲಿ ಸ್ವಾಭಾವಿಕವಾದುವು ಎಂದರೆ ಅನಾಗರಿಕ ಅಥವಾ ಅರಾಜಕೀಯ ಸ್ಥಿತಿಗೆ ಸಂಬಂಧಪಟ್ಟುವು. ಈ ಪದಗಳ ಅರ್ಥಭೇದಗಳು ತತ್ವಭೇದಗಳಾಗಿ ಪರಿಣಮಿಸಿವೆ. ಆಧುನಿಕ ಒಡಂಬಡಿಕೆಯ ತತ್ವ ಅರಿಸ್ಟಾಟಲಿನ ತತ್ವಕ್ಕೆ ವಿರೋಧವಾದುದು. ಅರಿಸ್ಟಾಟಲಿನ ಪ್ರಕಾರ ರಾಷ್ಟ್ರವು ಮಾನವನ ಜೀವನಕ್ಕೆ ಹತ್ತಿಬಂದುದು; ಹಾಬ್ಸ್ ಮುಂತಾದವರ ಪ್ರಕಾರ ಇದು ಈಚೆಗೆ ಒಡಂಬಡಿಕೆಯಿಂದ ಹುಟ್ಟಿದುದು. ಅಂದರೆ ಈ ಆಧುನಿಕ ತಾತ್ವಿಕರು ಮಾನವನ ಚರಿತ್ರೆಯಲ್ಲಿ ಎರಡು ಪರಿಸ್ಥಿತಿಗಳು ಇದ್ದಂತೆ ಹೇಳಿದ ಹಾಗಾಯಿತು. ಒಂದು ಸಮಾಜದ ಆದಿಯಲ್ಲಿ ಇದ್ದ ಅನಾಯಕ ಸ್ಥಿತಿ; ಇನ್ನೊಂದು ಇದಾದ ತರುವಾಯ ಹುಟ್ಟಿದ ನಾಯಕನುಳ್ಳ ಅಂದರೆ ಪ್ರಭುವುಳ್ಳ ರಾಷ್ಟ್ರೀಯ ಸ್ಥಿತಿ. ಮೊದಲನೆಯ ಸ್ಥಿತಿಯಿಂದ ಜನರು ಎರಡನೆಯ ಸ್ಥಿತಿಗೆ ಹೇಗೆ ಬಂದರು ಎಂಬುದೇ ಈ ತಾತ್ವಿಕರ ಮುಖ್ಯ ಪ್ರಶ್ನೆ.

ಇದಕ್ಕೆ ಹಾಬ್ಸ್, ಲಾಕ್, ರೂಸೋ—ಈ ಮೂವರೂ ಬೇರೆ ಬೇರೆ ಉತ್ತರಗಳನ್ನು ಕೊಡುವರು. ಇವು ಬೇರೆ

ಬೇರೆಯಾಗುವುದಕ್ಕೆ ಅನಾಗರಿಕ ಸ್ಥಿತಿಯ ವಿಚಾರವಾಗಿ ಅವರು ಹೊಂದಿದ್ದ ಭಿನ್ನಭಾವನೆಗಳೇ ಕಾರಣ.

ಸಮಾಜದ ಆರಂಭದಲ್ಲಿ ಮಾನವನಿದ್ದ ಸ್ಥಿತಿಯನ್ನೂ ಅದರಿಂದ ರಾಷ್ಟ್ರವೇರ್ಪಟ್ಟದ್ದನ್ನೂ ಹಾಬ್ಸ್ ಈರೀತಿ ನಿರೂಪಿಸಿರುವನು: "ಈ ಅರಾಜಕೀಯ ಸ್ಥಿತಿಯಲ್ಲಿ ಮಾನವನಿಗೆ ಯಾವ ನಿರ್ಬಂಧವೂ ಇಲ್ಲದೆ, ಪ್ರತಿಯೊಬ್ಬನೂ ತನ್ನ ಇಚ್ಛೆಬಂದಹಾಗೆ ನಡೆಯುತ್ತಿದ್ದನು. ಆದರೆ ಸ್ವಾತಂತ್ರ್ಯಕ್ಕೆ ಹತ್ತರಷ್ಟು ಪ್ರಾಣ ಭಯವೂ ಇತ್ತು. ಇಂತಹ ಸ್ಥಿತಿಯಲ್ಲಿ ಇದ್ದ ಸ್ವಾತಂತ್ರ್ಯವನ್ನಾದರೂ ಅನುಭವಿಸುವುದು ಹೇಗೆ? ಈ ಸ್ವಾಭಾವಿಕಸ್ಥಿತಿಯನ್ನು ಹಾಬ್ಸ್ ಹೇಯವಾದದ್ದು, ಮೃಗಪ್ರಾಯವಾದದ್ದು, ನಶ್ವರವಾದದ್ದು ಎಂದು ವರ್ಣಿಸಿರುವನು. ಈ ಪರಿಸ್ಥಿತಿಯಲ್ಲಿ ಶಾಂತಿ ಇರಲು ಸಾಧ್ಯವಿಲ್ಲ. ಪ್ರತಿಯೊಬ್ಬನೂ ಇತರರಮೇಲೆ ಬಿದ್ದು ಅವರ ಪ್ರಾಣವನ್ನು ತೆಗೆಯಲು ಅಥವಾ ಆಸ್ತಿಯನ್ನು ದೋಚಿಕೊಂಡು ಹೋಗಲು ಹೊಂಚುಹಾಕುತ್ತಿರುವನು. ಈ ಭಯೋತ್ಪಾದಕ ಸ್ಥಿತಿಯಿಂದ ತಪ್ಪಿಸಿಕೊಂಡು ನೆಮ್ಮದಿಯಾಗಿ ಬಾಳುವುದು ಹೇಗೆ ಎಂಬುದು ದೊಡ್ಡ ಸಮಸ್ಯೆಯಾಯಿತು. ಇಂತಹ ಸ್ಥಿತಿಯನ್ನು ಕೊನೆಗಾಣಿಸಬೇಕೆಂದು ಎಲ್ಲರೂ ಬಯಸಿ ತಮ್ಮ ವ್ಯಕ್ತಿಗತವಾದ ಸ್ವಾತಂತ್ರ್ಯವನ್ನೂ ಹಕ್ಕುಗಳನ್ನೂ ಬಿಟ್ಟುಕೊಡುವೆವೆಂದು ಎಲ್ಲರೂ ಒಪ್ಪಂದಕ್ಕೆ ಬಂದು ತಮ್ಮಲ್ಲಿ ಒಬ್ಬನನ್ನು ಅಥವಾ ಒಂದು ಸಭೆಯನ್ನು ಚುನಾಯಿಸಿ ಅವನ ಅಥವಾ ಆ ಸಭೆಯ ಶಾಸನದಂತೆ ನಡೆದುಕೊಳ್ಳುವೆವೆಂದು ಎಲ್ಲರೂ ಒಂದು ಒಪ್ಪಂದಕ್ಕೆ ಸಹಿಹಾಕಿದರು. ಹೀಗೆ ಸಮಾಜ ನಿರ್ಮಾಣವಾಯಿತು; ಎಲ್ಲರೂ ಸೇರಿ ಮಾಡಿಕೊಂಡ ಈ ಒಪ್ಪಂದ ನ್ಯಾಯಬದ್ಧವಾಯಿತು. ಇದರಿಂದ ಜಾರಿಕೊಳ್ಳಲು

ಯಾರಿಗೂ ಹಕ್ಕಿಲ್ಲದಂತಾಯಿತು. ಈ ಒಪ್ಪಂದಕ್ಕೆ ವಿರೋಧ ವಾಗಿ ವರ್ತಿಸಿದವನನ್ನು ಶಿಕ್ಷೆಗೆ ಗುರಿಮಾಡಿ ದಾರಿಗೆ ತರುವ ಪ್ರಯತ್ನಗಳು ನಡೆದುವು. ಆಗ ಮಾಡಿಕೊಂಡ ಒಪ್ಪಂದದ ಫಲವಾಗಿ ರಾಜ್ಯಸಂಸ್ಥೆಯು ಹುಟ್ಟಿತು. ಒಪ್ಪಂದಕ್ಕೆ ವಿರೋಧ ವಾಗಿ ಎಂದು ಮನುಷ್ಯರು ನಡೆಯುವರೋ ಅಂದು ಕ್ರಾಂತಿ ಯಾಗುವುದು. ಕಳೆದುಹೋಗಿದ್ದ ಭಯೋತ್ಪಾದಕ ನೈಸರ್ಗಿಕ ಸ್ಥಿತಿಯು ಆ ಕ್ರಾಂತಿಯಿಂದ ಪುನಃ ತಲೆದೋರುವುದು. ಆದು ದರಿಂದ ಇದು ಪುನಃ ತಲೆದೋರದ ಹಾಗೆ ಮಾಡಲು ಜನರು ಪ್ರಭುತ್ವಶಕ್ತಿಗೆ ತಲೆಬಾಗಿ ಅದರ ಶಾಸನಗಳನ್ನು ಪಾಲಿಸ ಬೇಕಾದದ್ದು ಪ್ರಜಾಧರ್ಮ. ಆಜನ್ಮಸಿದ್ಧವಾದ ತಮ್ಮ ಹಕ್ಕುಗಳನ್ನು ಬಿಟ್ಟುಕೊಟ್ಟು ಜನರು ಗಳಿಸಿದ ನ್ಯಾಯಸಂಸ್ಥೆಯು ರಾಜ್ಯಸಂಸ್ಥೆ—ಇದು ಹಾಬ್ಸನ ತರ್ಕ. ಈ ತರ್ಕವು ಸ್ಟ್ಯುಯರ್ಟರ ನಿರಂಕುಶಪ್ರಭುತ್ವ ತತ್ವಕ್ಕೆ ಬೆಂಬಲವಾಯಿತು.

ಲಾಕನ ಅಭಿಪ್ರಾಯದಲ್ಲೂ, ಮಾನವನು ತನ್ನ ನೈಸರ್ಗಿಕ ಸ್ಥಿತಿಯಲ್ಲಿ ಸಂಪೂರ್ಣವಾದ ಸ್ವಾತಂತ್ರ್ಯಹೊಂದಿದ್ದನು. ಯಾರೊಬ್ಬರ ಆಜ್ಞೆಗೂ ಒಳಗಾಗದೆ ತನಗೆ ಇಷ್ಟಬಂದಂತೆ ತನ್ನ ತನುಮನಧನಗಳನ್ನು ಉಪಯೋಗಿಸಿಕೊಳ್ಳುವ ಸ್ವಾತಂತ್ರ್ಯ ಅವನಿಗಿತ್ತು. ಇದಲ್ಲದೆ ಈ ಪರಿಸ್ಥಿತಿಯಲ್ಲಿ ಎಲ್ಲರೂ ಸಮಾನರಾಗಿದ್ದರು. ಈ ಅಭಿಪ್ರಾಯಗಳಲ್ಲಿ ಲಾಕನಿಗೂ ಹಾಬ್ಸನಿಗೂ ವ್ಯತ್ಯಾಸವಿರಲಿಲ್ಲ. ಆದರೆ ಹಾಬ್ಸನು ಹೇಳುವಂತೆ ನೈಸರ್ಗಿಕಸ್ಥಿತಿಯಲ್ಲಿ ಮನುಷ್ಯರು ನಯ ನೀತಿಗಳಿಲ್ಲದೆ ಕಾಡು ಮೃಗಗಳಂತೆ ಕಚ್ಚಾಡುತ್ತಿದ್ದರೆಂದು ಲಾಕನು ನಂಬಲಿಲ್ಲ. ಆ ಸ್ಥಿತಿಯಲ್ಲಿ ರಾಜ್ಯಸಂಸ್ಥೆ ಇರಲಿಲ್ಲವೆಂದು ಹೇಳಬಹುದೇ ಹೊರತು ಸಮಾಜವೇ ಇರಲಿಲ್ಲವೆಂಬುದಾಗಲಿ ಕಟ್ಟುಕಾಯಿದೆಗಳು ಇರ

ಲಿಲ್ಲವೆಂದಾಗಲಿ ಹೇಳುವುದು ತಪ್ಪು ಎಂದು ಭಾವಿಸಿದ್ದನು. ಅಲ್ಲದೆ ಸಮಾನತೆಗೆ ಲಾಕನು ನಿಷ್ಕೃಷ್ಟವಾದ ಅರ್ಥವನ್ನೂ ಕೊಟ್ಟನು. ದೇಹದಾರ್ಢ್ಯದಲ್ಲಾಗಲಿ, ಬುದ್ಧಿಶಕ್ತಿಯಲ್ಲಾಗಲಿ, ಅಥವಾ ಆಸ್ತಿಪಾಸ್ತಿಗಳಲ್ಲಿಯಾಗಲಿ ನೈಜಸ್ಥಿತಿಯಲ್ಲಿರುವಾಗ ಎಲ್ಲರೂ ಸಮಾನರಲ್ಲ; ಇತರರ ಆಡಳಿತಕ್ಕೆ ಒಳಗಾಗದೆ ತಮಗೆ ಇಷ್ಟಬಂದಂತೆ ವರ್ತಿಸುವ ಸ್ವಾತಂತ್ರ್ಯಮಾತ್ರ ಎಲ್ಲರಿಗೂ ಸಮ ವಾಗಿತ್ತು. ಪ್ರತಿಯೊಬ್ಬನೂ ಸಮಾನಸ್ವಾತಂತ್ರ್ಯವುಳ್ಳವನಾಗಿರ ಬೇಕಾದರೆ ಅವನು ಇತರರೂ ತನ್ನಂತೆಯೇ ಸ್ವತಂತ್ರರು ಎಂಬ ತತ್ವವನ್ನು ಅಂಗೀಕರಿಸಬೇಕು-ಗೌರವಿಸಬೇಕು. ಈ ನ್ಯಾಯ ವನ್ನು ಆಚರಣೆಗೆ ತರಬಲ್ಲ ನ್ಯಾಯಾಧೀಶನಿಲ್ಲದಿದ್ದುದೇ ಈ ಅರಾ ಜಕೀಯಸ್ಥಿತಿಯ ಒಂದು ಕೊರತೆ. ಇಂಥಾ ನ್ಯಾಯಾಧೀಶನನ್ನು ಏರ್ಪಡಿಸಿದಾಗ ಶಿಸ್ತು ಹುಟ್ಟಿತು. ಆದರೆ ಪ್ರತಿವ್ಯಕ್ತಿಗೂ ತನ್ನ ಪ್ರಾಣ, ಮಾನ, ಆಸ್ತಿಪಾಸ್ತಿಗಳನ್ನು ಉಳಿಸಿಕೊಳ್ಳುವ ಸ್ವಾತಂತ್ರ್ಯ ಆಜನ್ಮಸಿದ್ಧವಾದುದು; ಅದನ್ನು ಕಸಿದುಕೊಳ್ಳುವ ಅಧಿಕಾರ ಯಾರಿಗೂ ಯಾವ ಸರ್ಕಾರಕ್ಕೂ ಇಲ್ಲ. ತಮ್ಮ ಸ್ವಾತಂತ್ರ್ಯದ ಹಕ್ಕನ್ನು ಸ್ಥಾಪಿಸಲು ಇಂಗ್ಲೆಂಡಿನ ಪ್ರಜೆಗಳು ಎಬ್ಬಿಸಿದ ರಾಜಕೀಯಕ್ರಾಂತಿಗೆ ಲಾಕನ ತತ್ವ ಬೆಂಬಲಕೊಟ್ಟಿತು.

ರೂಸೋವು ಮಾನವನ ನೈಸರ್ಗಿಕ ಸ್ಥಿತಿಯನ್ನು ವಿವರಿಸು ವುದರಲ್ಲಿ ಲಾಕನಿಗಿಂತಲೂ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿರುತ್ತಾನೆ. ಲಾಕನ ಅಭಿಪ್ರಾಯದಲ್ಲಿ ನೈಸರ್ಗಿಕಸ್ಥಿತಿ ಶಾಂತಿಯುತವಾದದ್ದಾದರೆ, ರೂಸೋವಿನ ಅಭಿಪ್ರಾಯದಲ್ಲಿ ಅದು ಆನಂದಯುತವಾದದ್ದಾಗಿತ್ತು. ಎಲ್ಲರೂ ಸ್ವತಂತ್ರರಾಗಿ ದ್ದರೂ ಯಾರಿಗೂ ದುರಾಶೆ ಇರಲಿಲ್ಲ. ಪ್ರಕೃತಿಮಾತೆಯು ನೀಡಿದ್ದನ್ನು ಸಂತೋಷದಿಂದ ಸ್ವೀಕರಿಸಿ ನಿಶ್ಚಿಂತೆಯಾಗಿ ಹಸು

ಮಕ್ಕಳಂತೆ ಬಾಳುತ್ತಿದ್ದರು. ಮನುಷ್ಯರ ಪರಸ್ಪರ ಸಂಬಂಧ ಸ್ನೇಹಪೂರಿತವಾಗಿತ್ತು. ಎಲ್ಲರೂ ಸ್ವತಂತ್ರರೂ ಸಮಾನರೂ ಆಗಿದ್ದುದಲ್ಲದೆ ಸಹೋದರ ಭಾವದಿಂದಲೂ ವರ್ತಿಸುತ್ತಿದ್ದರು. ಸಮಾಜದ ಈ ಸರಳತೆಯು ಕ್ರಮೇಣ ಹೋಗಿ ಅನೇಕ ತೊಡಕುಗಳು ಒದಗಿದುವು. ಜನಸಂಖ್ಯೆ ಹೆಚ್ಚಿತು. ಪ್ರತಿಯೊಬ್ಬರೂ ಪ್ರತ್ಯೇಕವಾಗಿ ಆಸ್ತಿಗಳಿಸಲು ಮೊದಲುಮಾಡಿದರು; ಲೇವಾದೇವಿ ಮತ್ತು ವ್ಯಾಪಾರ ಪ್ರಾರಂಭವಾದುವು. ಇವುಗಳ ಪರಿಣಾಮವಾಗಿ ಕೆಲವರು ತಮ್ಮ ಸ್ವಾತಂತ್ರ್ಯವನ್ನು ಹೆಚ್ಚಿಸಿಕೊಂಡರು; ಅನೇಕರು ತಮ್ಮ ಸ್ವಾತಂತ್ರ್ಯವನ್ನು ಕಳೆದುಕೊಂಡರು. ಸ್ವಾತಂತ್ರ್ಯಪ್ರಿಯರಾದ ಮಾನವರು ತಮ್ಮ ಆಜನ್ಮಸಿದ್ಧವಾದ ಹಕ್ಕುಗಳನ್ನು ಉಳಿಸಿಕೊಳ್ಳುವ ಏರ್ಪಾಡುಮಾಡಿದರು: ಈ ಏರ್ಪಾಡೇ ಸಾಮಾಜಿಕ ಒಪ್ಪಂದದ ಏರ್ಪಾಡು. ಈ ಒಪ್ಪಂದದಿಂದ ರಾಜ್ಯದ ಉತ್ಪತ್ತಿಯಾಯಿತು. ರಾಜ್ಯವು ಹುಟ್ಟಿದುದು ಜನತೆಯ ಸಮ್ಮತಿಗನುಸಾರವಾಗಿ. ಒಂದು ರಾಜ್ಯಸಂಸ್ಥೆ ಪ್ರಜೆಗಳ ಒಪ್ಪಿಗೆಯನ್ನು ಪಡೆಯದ ಪಕ್ಷದಲ್ಲಿ ಪ್ರಜೆಗಳು ಅದಕ್ಕೆ ವಿಧೇಯರಾಗಿರಬೇಕಾಗಿಲ್ಲ ಎಂಬುದನ್ನು ಸ್ಥಾಪಿಸುವುದೇ ರೂಸೋವಿನ ಒಪ್ಪಂದ ತತ್ವದ ಉದ್ದೇಶ. ಪ್ರಭುಶಕ್ತಿಗೆ ಪ್ರಜೆಗಳ ಸಂಕಲ್ಪವೇ ನಿಜವಾದ ಆಸರೆ; ಜನತೆಯ ಸಾಮೂಹಿಕ ಸಂಕಲ್ಪವನ್ನು ನೆರವೇರಿಸುವುದೇ ಸರ್ಕಾರದ ಕರ್ತವ್ಯ. ಯಾವ ಏರ್ಪಾಡು ಪ್ರಜೆಗಳ ಸೌಖ್ಯಕ್ಕೆ ಸಾಧಕವಾಗುವುದೋ ಅದು ಪ್ರಜಾಸಂಕಲ್ಪಕ್ಕೆ ಅನುಸಾರವಾದದ್ದೆಂದು ರೂಸೋವಿನ ಅಭಿಮತ. ಸರ್ಕಾರವು ಪ್ರಜಾಸಂಕಲ್ಪವನ್ನು ನೆರವೇರಿಸದೆ ಇದ್ದಪಕ್ಷದಲ್ಲಿ ಜನರು ತಾವು ಸರ್ಕಾರಕ್ಕೆ ಕೊಟ್ಟ ಪ್ರಭುತ್ವವನ್ನು ತೆಗೆದುಹಾಕಿ ಆ ಪ್ರಭುತ್ವವನ್ನು ತಾವೇ ವಹಿಸಿಕೊಳ್ಳ

ಬಹುದು. ರೂಸೋವಿನ ಈ ವಾದವು ೧೮ ನೆಯ ಶತಮಾನದ ಫ್ರಾನ್ಸಿನ ಮಹಾಕ್ರಾಂತಿಗೆ ಉತ್ತೇಜಕವಾಯಿತು. "ಸ್ವಾತಂತ್ರ್ಯ, ಸಮಾನತೆ, ಭ್ರಾತೃಭಾವ"–ರೂಸೋವಿನ ಈ ಮಾತು ಆ ಕ್ರಾಂತಿಯ ಕೂಗಾಯಿತು.

ಈ ಮೂವರ ರಾಜಕೀಯ ತತ್ವಗಳನ್ನು ಬೇರೆ ಬೇರೆ ವಿಮರ್ಶೆಮಾಡಲು ಇಲ್ಲಿ ಅವಕಾಶವಿಲ್ಲ. ಆದರೆ ಈ ಮೂರಕ್ಕೂ ಸಾಮಾನ್ಯವಾಗಿರುವ ಕೆಲವು ಅಂಶಗಳನ್ನು ಮಾತ್ರ ಇಲ್ಲಿ ವಿಮರ್ಶಿಸಿದೆ.

ಹಿಂದೆ ಯಾವುದೋ ಒಂದು ಕಾಲದಲ್ಲಿ ಸಾಮೂಹಿಕ ಒಡಂಬಡಿಕೆ ಏರ್ಪಟ್ಟಿತ್ತೆಂಬುದಕ್ಕೆ ಚರಿತ್ರೆಯಲ್ಲಿ ಆಧಾರವಿಲ್ಲ. ಎಲ್ಲಿಂದ ಎಲ್ಲಿಯವರೆಗೆ ಹೋಗಲಿ ಮಾನವನು ಯಾವಕಾಲದಲ್ಲೂ ಅರಾಜಕೀಯಸ್ಥಿತಿಯಲ್ಲಿದ್ದಂತೆ ಕಾಣಬರುವುದಿಲ್ಲ. ಕೇವಲ ಹಿಂದುಳಿದ ಕಾಡುಜನರಲ್ಲಿ ಕೂಡ ರಾಜಕೀಯ ಭಾವನೆ, ರಾಜಕೀಯ ವ್ಯವಸ್ಥೆ ಇದೆ; ಕಾಡುಜನರ ವಾಸ್ತವ ಸ್ಥಿತಿಗೂ ಹಾಬ್ಸ್ ರೂಸೋಗಳ ಚಿತ್ರಕ್ಕೂ ಬಹಳ ವ್ಯತ್ಯಾಸ ಇದೆ. ಹಾಬ್ಸ್ ಹೇಳುವಂತೆ ಕಾಡುಮನುಷ್ಯ ಕ್ರೂರಿಯೂ ಕಪಟಿಯೂ ಆಗಿರಲಿಲ್ಲ; ರೂಸೋ ಹೇಳುವಂತೆ ಶೀಲವಂತನೂ ಸಮತಾಭಾವವುಳ್ಳವನೂ ಆಗಿರಲಿಲ್ಲ. ನಮ್ಮಲ್ಲಿರುವಂತೆ ಕಾಡುಜನರಲ್ಲೂ ಕಾಮ ಕ್ರೋಧ ಮದ ಮಾತ್ಸರ್ಯಗಳು ಇದ್ದುವು; ನಮ್ಮಲ್ಲಿರುವಂತೆ ಅವರಲ್ಲೂ ಧರ್ಮ, ಕಲೆ, ಮತಗಳಲ್ಲಿ ಆಸಕ್ತಿ–ಇವು ಇದ್ದುವು; ನಮ್ಮಲ್ಲಿರುವಂತೆ ಅವರಲ್ಲೂ ಪ್ರಭುತ್ವವಿತ್ತು. ಆದರೆ ಅವರ ರಾಷ್ಟ್ರವು ನಮ್ಮ ರಾಷ್ಟ್ರಗಳಂತೆ ದೊಡ್ಡ ರಾಷ್ಟ್ರಗಳಾಗಿಯೂ ಇರಲಿಲ್ಲ, ನಮ್ಮಲ್ಲಿರುವಂತೆ ಪ್ರಭುತ್ವದ ಕೆಲಸಕಾರ್ಯಗಳು ಅನೇಕ ಮುಖವಾಗಿಯೂ ಇರಲಿಲ್ಲ.

ಅರಾಜಕೀಯ ಸ್ಥಿತಿಯಲ್ಲಿ ಮಾನವನು ಕೆಲವು ಸ್ವಾಭಾವಿಕವಾದ ಹಕ್ಕುಗಳನ್ನು ಪಡೆದಿದ್ದನು ಎಂದು ಹೇಳುವುದು ಸರಿಯಲ್ಲ. ರಾಜಕೀಯ ಆವರಣದ ಮೂಲಕವಲ್ಲದೆ ಜನರಿಗೆ ಹಕ್ಕುಗಳೂ ಇಲ್ಲ, ಬಾಧ್ಯತೆಗಳೂ ಇಲ್ಲ. ಆದರೆ ಸ್ವಾಭಾವಿಕವಾದುವು ಎಂದರೆ ನ್ಯಾಯವಾದುವು, ಮಾನವ ಜೀವನಕ್ಕೆ ಅಗತ್ಯವಾದುವು ಎಂದು ತಿಳಿಯುವುದಾದರೆ ಖಂಡಿತವಾಗಿಯೂ ಪ್ರತಿಯೊಬ್ಬ ಸಾಮಾಜಿಕನಿಗೂ ಅಜನ್ಮಸಿದ್ಧವಾದ ಹಕ್ಕುಗಳಿವೆ.

ಒಡಂಬಡಿಕೆಯ ತತ್ತ್ವದಲ್ಲಿ ಒಂದು ಮುಖ್ಯ ಸತ್ಯಾಂಶವಿದೆ. ಪ್ರಭುತ್ವವು ನಿಲ್ಲಬೇಕಾದುದು ಜನರ ಸಮ್ಮತಿಯಮೇಲೆ. ಆದರೆ ಈ ಸಮ್ಮತಿಯು ಒಂದು ಒಡಂಬಡಿಕೆಯಮೂಲಕ ವ್ಯಕ್ತವಾಗಬೇಕಾದುದಿಲ್ಲ. ಆಧುನಿಕ ಚರಿತ್ರೆಯಲ್ಲಿ ಆ ವಿಧವಾದ ಒಡಂಬಡಿಕೆಗಳ ಒಂದೆರಡು ಉದಾಹರಣೆಗಳಿವೆ. ಆದರೆ ಸಾಮಾನ್ಯವಾಗಿ ಪ್ರಜೆಗಳ ಸಮ್ಮತಿಯು ಅವ್ಯಕ್ತವಾಗಿಯೇ ಇರುತ್ತದೆ.

ರೂಸೋ ಈ ಸಮ್ಮತಿಯನ್ನು ಜನರ ಸಾಮಾನ್ಯ ಸಂಕಲ್ಪ* ಎಂದು ಕರೆಯುವನು. ಈ ಸಂಕಲ್ಪವೇ ನಿಜವಾದ

---

*' ಸಾಮಾನ್ಯ ಎಂಬುದು ಒಂದು ಪಾರಿಭಾಷಿಕ ಪದ. ಜನರ ಸಾಮಾನ್ಯ ಸಂಕಲ್ಪ ಎಂದರೆ ಬಹುಮತದಿಂದ ಹೊರಬಿದ್ದ ಸಂಕಲ್ಪವೆಂದು ತಿಳಿಯಕೂಡದು. ಜನರ ನಿಜವಾದ ಅಭ್ಯುದಯಕ್ಕೆ ಕಾರಣವಾದ ಸಂಕಲ್ಪವನ್ನು ಮಾತ್ರ ಜನರ ಸಾಮಾನ್ಯಸಂಕಲ್ಪವೆಂದು ತಿಳಿಯಬೇಕು. ಬಹುಮತದಿಂದ ಸಂಕಲ್ಪವಾದುದು ಜನರ ಅಭ್ಯುದಯಕ್ಕೆ ಕಾರಣವಾಗದಿರಬಹುದು. ಹೆಚ್ಚುಜನ ಒಂದು ವಿಷಯವನ್ನು ಒಪ್ಪಿದಮಾತ್ರಕ್ಕೇ ಅದು ಸತ್ಯವೂ ನ್ಯಾಯವೂ ಆಗಲೇ ಬೇಕಾದುದಿಲ್ಲ. ಮುಖ್ಯವಾಗಿ ಆ ಸಂಕಲ್ಪ ನ್ಯಾಯವಾದದ್ದಾಗಬೇಕಾದರೆ ಅದು ಬುದ್ಧಿಗೆ ಸಮರ್ಪಕವಾಗಿರಬೇಕು.

ಪ್ರಭುತ್ವವೆಂದು ಅವನ ಅಭಿಪ್ರಾಯ. ಜನರೇ ಪ್ರಭುಗಳು ಅವರ ಸಂಕಲ್ಪವೇ ಪ್ರಭುತ್ವ ಎಂಬುದು ಬರಿಯ ಧ್ಯೇಯ ಅಂಥಾ ಪ್ರಭುತ್ವ ಪ್ರಜಾಪ್ರಭುತ್ವವಿರುವ ದೇಶಗಳಲ್ಲೂ ಸಿದ್ಧಿಯಾಗಿದೆಯೆಂದು ಹೇಳಲಾಗುವುದಿಲ್ಲ. ಆದರೂ ಪ್ರಜೆಗಳ ಸಂಕಲ್ಪವೇ ಪ್ರಭುತ್ವ ಎಂಬ ಧ್ಯೇಯ ಆಧುನಿಕ ರಾಜಕೀಯ ತತ್ವಶಾಸ್ತ್ರದಲ್ಲಿ ಅತ್ಯಂತ ಪರಿಣಾಮಕಾರಿಯಾಗಿದೆ.

## IV ಉಪಯೋಗವಾದ ಮತ್ತು ವ್ಯಕ್ತಿಸ್ವಾತಂತ್ರ್ಯವಾದ: ಜೆ. ಎಸ್. ಮಿಲ್

ತಾತ್ವಿಕವಾಗಿ ಈ ಸಿದ್ಧಾಂತವನ್ನು ಸಮರ್ಥಿಸಿದವರು ಹತ್ತೊಂಭತ್ತನೆಯ ಶತಮಾನದ ಉಪಯೋಗವಾದಿಗಳು (ಯುಟಿಲಿಟೇರಿಯನ್ಸ್). ಈ ವಾದದ ಪ್ರತಿಷ್ಠಾಪನಾಚಾರ್ಯರು ಜರಿಮಿಬೆಂಥಮ್ ಮತ್ತು ಜೆ.ಎಸ್. ಮಿಲ್ ಎಂಬವರು. ರಾಜಕೀಯ ತತ್ವಗಳು ಸಾಧುವೇ ಅಸಾಧುವೇ ಎಂಬುವಕ್ಕೆ ವ್ಯಾವಹಾರಿಕವಾಗಿ ಅವುಗಳಿಂದಾಗುವ ಉಪಯೋಗವೇ ಪ್ರಾಮಾಣ್ಯ* ಎಂಬುದು ಇವರ ಮುಖ್ಯ ಅಭಿಪ್ರಾಯ. ಯಾವುದು ವ್ಯಕ್ತಿಗಳಿಗೆ ತೃಪ್ತಿಯುಂಟು ಮಾಡಬಲ್ಲುದೋ ಅಥವಾ ಸಂತೋಷವನ್ನು ತರಬಲ್ಲುದೋ ಅದು ಉಪಯೋಗವಾದದ್ದು. ಸಮಾಜವು ಅನೇಕ ವ್ಯಕ್ತಿಗಳಿಂದ ಕೂಡಿದೆ. ಪ್ರತಿ ವ್ಯಕ್ತಿಯೂ ತನ್ನ ತನ್ನ ಸೌಖ್ಯವನ್ನು ಗಳಿಸಿಕೊಂಡರೆ ಸಮಾಜವು ಒಟ್ಟಿಗೆ ತನ್ನ ಸೌಖ್ಯವನ್ನು ಗಳಿಸಿಕೊಂಡಂತಾಗುವುದು. ಒಬ್ಬೊಬ್ಬನೂ ತನ್ನ ಸುಖವನ್ನು ಸಂಪಾದಿಸಿಕೊಳ್ಳಲು ಮಾಡುವ ಪ್ರಯತ್ನಕ್ಕೆ ಸರ್ಕಾರವು ತಡೆ

* ಯಾವುದರ ಸಹಾಯದಿಂದ ಒಂದು ತತ್ವವು ಸಾಧು ಅಥವಾ ಅಸಾಧು ಎಂದು ನಿರ್ಧರಿಸುವೆವೋ ಅವಕ್ಕೆ ಪ್ರಾಮಾಣ್ಯ ಎಂದು ಹೆಸರು.

ಯುಂಟುಮಾಡಕೂಡದು. ಹಾಗೆ ಪ್ರತಿಯೊಬ್ಬನಿಗೂ ತನ್ನ ಸುಖವನ್ನು ನೋಡಿಕೊಳ್ಳಲು ಅವಕಾಶಕೊಟ್ಟರೆ ಒಟ್ಟಿನಲ್ಲಿ ಸಮಾಜದ ಸುಖದ ಮೊತ್ತವೂ ಹೆಚ್ಚುವುದು. "ಅತಿ ಸಂಖ್ಯಾತರ ಅತ್ಯಂತ ಸುಖವೇ" ರಾಜ್ಯದ ಧ್ಯೇಯ. ಇದು ಉಪಯೋಗವಾದದ ಸಾರಾಂಶ.

ಈ ವಾದದಲ್ಲಿ ಅನೇಕ ಅಸಂಗತ ಅಂಶಗಳಿವೆ. ಅವುಗಳಲ್ಲಿ ಒಂದನ್ನು ಇಲ್ಲಿ ಸೂಚಿಸುವುದು ಅತ್ಯಾವಶ್ಯಕ. ಪ್ರತಿ ವ್ಯಕ್ತಿಯೂ ತನ್ನ ತನ್ನ ಸ್ವಾರ್ಥವನ್ನು ಸಾಧಿಸಿಕೊಂಡರೆ ಒಟ್ಟು ಸಮಾಜವೂ ತನ್ನ ಸೌಖ್ಯವನ್ನು ಸಾಧಿಸಿಕೊಂಡಂ ತಾಗುವುದಿಲ್ಲ. ಒಬ್ಬನು ತನ್ನ ಸ್ವಾರ್ಥವನ್ನು ಗಳಿಸಿದಾಗ ಇತರರ ಸೌಖ್ಯಕ್ಕೆ ಭಂಗತರದಿದ್ದರೇನೋ ಹೀಗೆ ಆಗ ಬಹುದು. ಆದರೆ ಯಾವ ಕಟ್ಟೂ ಇಲ್ಲದೆ ಪ್ರತಿವ್ಯಕ್ತಿ ತನ್ನ ಸ್ವಾರ್ಥವನ್ನೇ ಹಿಡಿದರೆ ಬಹುಶಃ ಅದು ಇತರರ ಸೌಖ್ಯಕ್ಕೆ ಅಡಚನೆಯಾಗುವುದು. ವಾಸ್ತವವಾಗಿ ಹಾಗೆಯೇ ಆಗಿದೆ. ಮಿತಿಯಿಲ್ಲದ ಪೈಪೋಟಿಯಿಂದ ದೇಶದ ಸಂಪತ್ತಿನ ಹೆಚ್ಚು ಭಾಗ ಕೆಲವರಲ್ಲಿ ಸೇರಿ, ಅಸಂಖ್ಯಾತರು ದಟ್ಟದರಿದ್ರರಾಗಿರು ತ್ತಾರೆ. ಒಬ್ಬನಿಗಿರುವಂತೆಯೇ ಇತರರಿಗೂ ಸುಖವನ್ನು ಅನು ಭವಿಸುವ ಹಕ್ಕು ಇರಬೇಕಾದರೆ ಪ್ರತಿಯೊಬ್ಬನೂ ತನ್ನ ಸ್ವಾರ್ಥ ವನ್ನೂ ವ್ಯಕ್ತಿಸ್ವಾತಂತ್ರ್ಯವನ್ನೂ ಸ್ವಲ್ಪಮಟ್ಟಿಗೆ ಸಾಮಾಜಿಕ ಹಿತಕ್ಕಾಗಿ ತ್ಯಾಗಮಾಡಬೇಕಾಗುವುದು.

ಇದನ್ನು ಮಿಲ್ ಒಪ್ಪಿಕೊಂಡಿರುವನು. ಮಿಲ್ಲಿನ ಅಭಿಪ್ರಾ ಯದಲ್ಲಿ ಸ್ವಾತಂತ್ರ್ಯವೆಂದರೆ ಸ್ವೇಚ್ಛಾಪ್ರವರ್ತನೆಯಲ್ಲ. ತನ್ನ ಇಚ್ಛೆಗಳನ್ನು ವಿವೇಕಯುತವಾಗಿ ಉಪಯೋಗಿಸಿಕೊಳ್ಳಬೇ ಕಾದ ಅವಕಾಶವೇ ಸ್ವಾತಂತ್ರ್ಯ. ಇಂಥಾ ವಿವೇಕಯುತವಾದ

ಸ್ವಾತಂತ್ರ್ಯವನ್ನು ಬಯಸುವವನು ಸುಸಂಸ್ಕೃತನಾಗಿರಬೇಕು, ವಿನಯಸಂಪನ್ನನಾಗಿರಬೇಕು. ಆದ್ದರಿಂದಲೇ ಮಕ್ಕಳಿಗೂ ಅನಾಗರಿಕ ಜನರಿಗೂ ಸ್ವಾತಂತ್ರ್ಯವನ್ನು ಕೊಡದಿರುವುದು. ಹಾಗೆಯೇ ತಮ್ಮ ಹಿತವನ್ನು ತಾವೇ ಗಳಿಸಿಕೊಳ್ಳಲು ಸಾಮರ್ಥ್ಯವಿಲ್ಲದ ಪ್ರಜೆಗಳಿಗೂ ಸ್ವಾತಂತ್ರ್ಯದ ಅರ್ಹತೆ ಇಲ್ಲ. ಸಮಾಜಹಿತದ ದೃಷ್ಟಿಯಿಂದ ವ್ಯಕ್ತಿಸ್ವಾತಂತ್ರ್ಯವು ಯಾವ ನಿಯಮಗಳಿಗೆ ಒಳಪಡಬೇಕೆಂಬುದನ್ನು ಮಿಲ್ಲನು ಸ್ಪಷ್ಟವಾಗಿ ಸೂಚಿಸಿರುವನು: ೧. ಇತರರಿಗೆ ಕೇಡುಕುಮಾಡುವ ಸ್ವಾತಂತ್ರ್ಯ ಯಾರಿಗೂ ಇರಬಾರದು. ೨. ಪ್ರತಿಯೊಬ್ಬನೂ ಸಮಾಜದ ಹಿತ ಸಾಧನೆಗಾಗಿ ಸಮಾಜ ಅಥವಾ ಸರ್ಕಾರ ವಿಧಿಸಿದ ನಿಯಮಗಳನ್ನು ಪಾಲಿಸಬೇಕು. ೩. ತಾತ್ವಿಕ, ವೈಜ್ಞಾನಿಕ, ಧಾರ್ಮಿಕ, ಸಾಮಾಜಿಕ ವಿಚಾರಗಳಲ್ಲಿ ಸರ್ವರಿಗೂ ವಾಕ್ಸ್ವತಂತ್ರ್ಯವಿರಬೇಕು ; ಜನರು ಭಿನ್ನಾಭಿಪ್ರಾಯವುಳ್ಳವರಲ್ಲಿ ಸಹಾನುಭೂತಿ ತೋರಿಸಬೇಕು. ೪. ತಾನು ಯಾವ ಸ್ವಾತಂತ್ರ್ಯವನ್ನು ಬಯಸುವನೋ ಅದೇ ಸ್ವಾತಂತ್ರ್ಯವನ್ನು ಇತರರೂ ಬಯಸಿದಾಗ ಅದನ್ನು ಪಾಲಿಸಬೇಕು.

ಪ್ರತಿಯೊಬ್ಬ ಮನುಷ್ಯನೂ ತನಗೆ ಶ್ರೇಯಸ್ಕರವಾದುದು ಯಾವುದು ಎಂಬುದನ್ನು ಅರಿತಿರುವನೆಂದು ಮಿಲ್ಲಿನ ನಂಬಿಕೆ. ಆದರೆ ಇದು ಎಷ್ಟರಮಟ್ಟಿಗೆ ನಿಜ ? ಜಾರನೂ, ಜೂಜುಕೋರನೂ, ಕುಡುಕನೂ—ತನ್ನ ಶ್ರೇಯಸ್ಸನ್ನು ತಾನು ಅರಿತಿರುವನೆ? ಇವರ ನಡತೆಯನ್ನು ತಿದ್ದಲು ಸರ್ಕಾರವು ತನ್ನ ಅಧಿಕಾರವನ್ನು ಉಪಯೋಗಿಸಕೂಡದೆಂಬ ವಾದವನ್ನು ಒಪ್ಪಬಹುದೇ? ಅನೇಕ ಸಮಯಗಳಲ್ಲಿ ಮನುಷ್ಯನು ತನಗೆ ತಾನೇ ಶತ್ರುವಾಗುತ್ತಾನೆ. ಅಂಥಾ ಸಂದರ್ಭಗಳಲ್ಲಿ ಆ ವ್ಯಕ್ತಿಯ ಹಿತಕ್ಕಾಗಿಯೇ ಅವನ

ವರ್ತನೆಯನ್ನು ತಡೆಯಬೇಕಾಗುವುದು. ಕುಡಿತವನ್ನು ನಿಲ್ಲಿಸಲು ಸರ್ಕಾರ ಪ್ರಯತ್ನಮಾಡಬೇಡವೇ? ಹಾಗೆ ತಡೆದರೆ ವ್ಯಕ್ತಿ ಸ್ವಾತಂತ್ರ್ಯಕ್ಕೆ ಭಂಗತಂದಂತಾಗುವುದೇ? ಈ ಪ್ರಶ್ನೆಗಳನ್ನು ಈಗ ನಮ್ಮಲ್ಲಿ ಅನೇಕರು ಕೇಳುತ್ತಿಲ್ಲವೇ?

## V. ಧ್ಯೇಯವಾದ:

## ಟಿ. ಎಚ್. ಗ್ರೀನ್

ವ್ಯಕ್ತಿಯು ತನ್ನ ಸ್ವಾತಂತ್ರ್ಯವನ್ನೂ ಉಳಿಸಿಕೊಳ್ಳಬೇಕು, ರಾಜ್ಯಸಂಸ್ಥೆಯು ತನ್ನ ಪ್ರಭುತ್ವಗಳನ್ನೂ ಉಳಿಸಿಕೊಳ್ಳಬೇಕು. ಇವೆರಡೂ ಒಟ್ಟಿಗೆ ಹೇಗೆ ಸಾಧ್ಯ ಎಂದು ಕೇಳಬಹುದು. ಇದಕ್ಕೆ ಮಿಲ್ಲಿನ ತತ್ವದಲ್ಲಿ ಸರಿಯಾದ ಉತ್ತರವಿಲ್ಲ. ಇದಕ್ಕೆ ಸಮರ್ಪಕವಾಗಿ ಉತ್ತರಹೇಳುವ ಪ್ರಯತ್ನವನ್ನು ಟಿ. ಎಚ್. ಗ್ರೀನ್ ಎಂಬ ಪ್ರಸಿದ್ಧ ಆಂಗ್ಲೇಯತಾತ್ವಿಕನು ಮಾಡಿರುವನು. ಇವನ ವಾದಕ್ಕೆ ಧ್ಯೇಯವಾದವೆಂದು ಹೆಸರು. ವ್ಯಕ್ತಿಸ್ವಾತಂತ್ರ್ಯಕ್ಕೂ ಸರ್ಕಾರವು ವಿಧಾಯಕಮಾಡಿದ ಕಾನೂನಿಗೂ ಇರುವ ವಿರೋಧ ಬರಿಯ ತೋರಿಕೆಯೇ ಹೊರತು, ನಿಜವಾಗಿ ಅವೆರಡಕ್ಕೂ ವಿರೋಧವಿಲ್ಲ. ರಾಷ್ಟ್ರದ ಕಾನೂನು ಪ್ರಜೆಗಳ ನ್ಯಾಯಬುದ್ಧಿಯಿಂದ ಹುಟ್ಟಿದುದರಿಂದ, ಅದು ನಮ್ಮ ಅಂತರಂಗದಲ್ಲಿರುವ ನ್ಯಾಯಭಾವವನ್ನೇ ಸಾರುವುದು. ಆದುದರಿಂದ ನಾವು ರಾಷ್ಟ್ರದ ಕಾನೂನನ್ನು ಪಾಲಿಸುವದರಿಂದ ನಾವು ನಮ್ಮ ಅಂತರಾತ್ಮನು ವಿಧಿಸುವ ನಿಯಮಕ್ಕೆ ವಿಧೇಯರಾದಂತೆ ಆಗುವುದು. ಪೋಲೀಸಿನವನು ಕಳ್ಳನನ್ನು ಹಿಡಿದು ನೀನು ಕಳ್ಳ ಎಂದು ಹೇಳಿದಾಗ, ಆ ಪೋಲೀಸಿನವನು ಹೇಳಿದುದೂ ಕಳ್ಳನ ಅಂತರಾತ್ಮ ಹೇಳಿ

ದುದೂ ಒಂದೇ. ಕಳ್ಳನ ಅಂತರಾತ್ಮವು ಪೋಲೀಸಿನವನಾಗಿ ಮೂರ್ತೀಭವಿಸಿ ಆವನನ್ನು ಬಂಧಿಸುವುದು. ನ್ಯಾಯವಾಗಿ ನಡೆಯುವವನ ಸ್ವಾತಂತ್ರ್ಯಕ್ಕೆ ರಾಷ್ಟ್ರದ ಕಾನೂನುಗಳಿಂದ ಸ್ವಲ್ಪವೂ ಬಾಧಕವಿಲ್ಲ. ಏಕೆಂದರೆ ರಾಷ್ಟ್ರದ ಕಾನೂನು ಅವನ ನ್ಯಾಯಭಾವವನ್ನೇ ಪ್ರತಿಬಿಂಬಿಸುತ್ತದೆ. ನ್ಯಾಯವಾಗಿ ನಡೆಯುವವನಿಗೆ ಅವನ ಆತ್ಮದಲ್ಲಿರುವ ಸತ್ಯವನ್ನು ತೋರಿಸಿಕೊಡುತ್ತದೆ. ಸ್ವೇಚ್ಛೆಯಾಗಿ ನಡೆಯುವುದು ನಿಜವಾದ ಸ್ವಾತಂತ್ರ್ಯವಲ್ಲ. ಅಂತರಾತ್ಮನ ಹೇಳಿಕೆಯಂತೆ ನಡೆಯುವುದೇ ನಿಜವಾದ ಸ್ವಾತಂತ್ರ್ಯ. ಇದನ್ನು ತಿಳಿದಮೇಲೆ ತನಗೂ ರಾಷ್ಟ್ರಕ್ಕೂ ವಿರೋಧವಿಲ್ಲ: ರಾಷ್ಟ್ರಕ್ಕೆ ವಿಧೇಯನಾಗಿ ನಡೆಯುವುದು ತಾನು ತನ್ನ ಆತ್ಮಕ್ಕೆ ವಿಧೇಯನಾಗಿ ನಡೆದಂತೆ ಎಂಬ ಭಾವನೆ ಹುಟ್ಟುವುದು.

ಈ ವಾದವನ್ನು ನವೀನ ವ್ಯಕ್ತಿಸ್ವಾತಂತ್ರ್ಯವಾದಿಗಳು ಒಪ್ಪುವುದಿಲ್ಲ. ರಾಷ್ಟ್ರವು ನಮ್ಮೊಳಗಿರುವ ಧರ್ಮಚೈತನ್ಯವನ್ನು ನಿಜವಾಗಿ ಪ್ರತಿಬಿಂಬಿಸಿದರೆ ಆಗ ವ್ಯಕ್ತಿಸ್ವಾತಂತ್ರ್ಯಕ್ಕೂ ರಾಷ್ಟ್ರವು ವಿಧಿಸುವ ಕಾನೂನಿಗೂ ವಿರೋಧಬರುವುದಿಲ್ಲ. ಆದರೆ ಇಂದಿನ ರಾಷ್ಟ್ರಗಳು ಅನೇಕ ವಿಚಾರಗಳಲ್ಲಿ ಧರ್ಮವನ್ನೂ ನ್ಯಾಯವನ್ನೂ ಪ್ರತಿಬಿಂಬಿಸುವುದಿಲ್ಲ. ರಾಜ್ಯದ ಕಾನೂನು ಬಂಡವಾಳಗಾರರಿಗೆ ಅನುಕೂಲವಾಗಿಯೂ ಕೂಲಿಗಾರರಿಗೆ ಪ್ರತಿಕೂಲವಾಗಿಯೂ ಇದೆ; ಅದು ಪ್ರಜೆಗಳಲ್ಲಿ ಪ್ರಬಲರಾದವರಿಗೆ ಸ್ವತಂತ್ರವಾಗಿ ಬಾಳಲು ಬೇಕಾದ ಅವಕಾಶ ಕೊಡುವುದಲ್ಲದೆ, ಅವರು ತಮ್ಮ ಪ್ರಾಬಲ್ಯದಿಂದ ಸಾವಿರಾರು ಜನರ ಸ್ವಾತಂತ್ರ್ಯವನ್ನು ಹಾಳುಮಾಡಿ ಅವರನ್ನು ತಮ್ಮ ಗುಲಾಮರಾಗಿಮಾಡಿಕೊಳ್ಳಲೂ ಅವಕಾಶಕೊಟ್ಟಿದೆ; ಆದುದರಿಂದ ಜನರು ತಮ್ಮ ಆರ್ಥಿಕಸ್ವಾತಂ

ತ್ರ್ಯವನ್ನು ಸಂಪಾದಿಸಲು ಮಾಡುವ ಪ್ರಯತ್ನಗಳನ್ನು ತಡೆಗಟ್ಟಿದೆ; ಹೀಗಿರುವುದರಿಂದ ಹತ್ತೊಂಬತ್ತನೆಯ ಶತಮಾನದ ವ್ಯಕ್ತಿಸ್ವಾತಂತ್ರ್ಯವಾದವು ಜನರ ಸ್ವಾತಂತ್ರ್ಯವನ್ನು ಕಾಪಾಡುವುದಿಲ್ಲ—ಈ ರೀತಿಯಾಗಿ ಎಲ್. ಟಿ. ಹಾಬ್‌ಹೌಸ್, ಹೆರಾಲ್ಡ್ ಲಾಸ್ಕಿ ಎಂಬ ಇಬ್ಬರು ಆಂಗ್ಲೇಯ ರಾಷ್ಟ್ರತತ್ವಜ್ಞರು ವಾದಮಾಡುತ್ತಾರೆ. ಅವರ ಅಭಿಪ್ರಾಯ ಈರೀತಿ ಇದೆ: ಸರ್ಕಾರವು ವ್ಯಕ್ತಿಸ್ವಾತಂತ್ರ್ಯವನ್ನು ಕಾಪಾಡಬೇಕಾದರೆ, ಈಗ ಇರುವ ಚುನಾವಣೆಯ ರೀತಿ ಬದಲಾಯಿಸಬೇಕು. ಒಂದೊಂದು ವೃತ್ತಿಯವರೂ ತಮ್ಮ ತಮ್ಮ ಪ್ರತಿನಿಧಿಗಳನ್ನು ಪಾರ್ಲಿಮೆಂಟಿಗೆ ಕಳುಹಿಸಬೇಕು. ಈಗ ಒಂದೊಂದು ತಾಲ್ಲೂಕಿನವರೂ, ಜಿಲ್ಲೆಯವರೂ ತಮ್ಮ ತಮ್ಮ ಪ್ರತಿನಿಧಿಗಳನ್ನು ಕಳುಹಿಸುವುದರಿಂದ ಯಾರುಯಾರೋ ಪ್ರತಿನಿಧಿಗಳಾಗಿ ಬಂದುಬಿಡುತ್ತಾರೆ. ಅವರಲ್ಲಿ ಹೆಚ್ಚು ಜನ ಲಾಯರುಗಳಾಗಬಹುದು, ಅಥವಾ ಕ್ರೈಸ್ತ ಮಠಗಳ ಪ್ರತಿನಿಧಿಗಳಾಗಬಹುದು; ಬಂಡವಾಳಗಾರರೋ ದೊಡ್ಡ ದೊಡ್ಡ ಜಮೀನುದಾರರೋ ಆಗಬಹುದು. ಹೀಗೆ ಆಗುವುದರಿಂದ ಜನರ ಪ್ರತಿನಿಧಿಗಳೆನಿಸಿಕೊಳ್ಳುವವರು ನಿಜವಾಗಿ ಜನರ ಪ್ರತಿನಿಧಿಗಳಾಗುವುದಿಲ್ಲ. ಇದರಬದಲು ಒಂದೊಂದುವೃತ್ತಿಯ ಜನರಿಗೂ ಪ್ರಾತಿನಿಧ್ಯವನ್ನು ಕೊಟ್ಟರೆ, ಮ್ಯುನಿಸಿಪಾಲಿಟಿಗಳು ತಮ್ಮ ಪಟ್ಟಣದ ಆಡಳಿತವನ್ನು ತಾವೇ ನಡಸುವ ಸ್ವಾತಂತ್ರ್ಯ ಪಡೆದರೆ, ಕೆಲಸಗಾರರು ಕಾರ್ಖಾನೆಗಳನ್ನು ತಾವೇ ಸ್ವತಂತ್ರವಾಗಿ ನಡಸುವ ಹಾಗಾದರೆ, ಉಪಾಧ್ಯಾಯರು ವಿದ್ಯಾಭ್ಯಾಸದ ರೀತಿನೀತಿಗಳನ್ನೂ ಆಡಳಿತ ವ್ಯವಸ್ಥೆಯನ್ನೂ ತಾವೇ ಸ್ವತಂತ್ರರಾಗಿ ಮಾರ್ಪಡಿಸಬಹುದಾದರೆ, ಆಗ ಜನರಿಗೆ ನಿಜವಾದ ಸ್ವಾತಂತ್ರ್ಯ ದೊರೆಯುವುದು. ರಾಷ್ಟ್ರವು

ಕೂಲಿಗಾರರ, ಅಥವಾ ಬಂಡವಾಳಗಾರರ, ಅಥವಾ ಮಠಾಧಿಕಾರಿಗಳ ಬಲಿಗೆ ಬೀಳುವುದಿಲ್ಲ. ಎಲ್ಲರ ಮತವನ್ನು ಸಮನಾಗಿ ಪ್ರತಿಬಿಂಬಿಸುವುದು; ಎಲ್ಲರಿಗೂ ತಮ್ಮ ತಮ್ಮ ನೀತಿಗಳಿಗನು ಸಾರವಾಗಿ ಬಾಳಿ ಬದುಕುವುದಕ್ಕೆ ಅವಕಾಶವುಂಟಾಗುವುದು.

## ೫. ಇಂದಿನ ರಾಜಕೀಯ ತತ್ವಗಳು

ಇಪ್ಪತ್ತನೆಯ ಶತಮಾನದ ರಾಜ್ಯತತ್ವದಲ್ಲಿರುವಷ್ಟು ವೈವಿಧ್ಯ ಹಿಂದೆಂದೂ ಇರಲಿಲ್ಲ. ಅಲ್ಲದೆ ಇಂದಿನಂತೆ ರಾಜ್ಯತತ್ವಗಳು ಹಿಂದೆಂದೂ ಹುಟ್ಟಿದ ಕ್ಷಣವೇ ಕಾರ್ಯರಂಗಕ್ಕೆ ಇಳಿಯುತ್ತಿರಲಿಲ್ಲ. ಇಂದಿನ ರಾಜಕೀಯದಲ್ಲಿ ಮುಖ್ಯಪಾತ್ರಗಳಾಗಿರುವುವು—೧. ಪ್ರಜಾಪ್ರತಿನಿಧಿಪ್ರಭುತ್ವತತ್ವ, ೨. ಸಮಾಜಸ್ವಾಮ್ಯತತ್ವ (ಸೋಷಿಯಲಿಸಂ), ೩. ಸಾಮೂಹಿಕಸ್ವಾಮ್ಯತತ್ವ (ಕಮ್ಯೂನಿಸಂ) ೪. ಫ್ಯಾಸಿಸಂ, ೫. ನಾಟ್ಸಿಸಂ. ಈ ತತ್ವಗಳು ಪ್ರತಿಯೊಂದೂ ಬರಿಯ ರಾಜಕೀಯ ಸಿದ್ಧಾಂತವಲ್ಲ, ಸಾಮಾಜಿಕ ಸಿದ್ಧಾಂತವೂ ಹೌದು. ಪ್ರಜಾಪ್ರತಿನಿಧಿ ಪ್ರಭುತ್ವತತ್ವವು ಇತರ ತತ್ವಗಳಂತೆ ಹೊಸದಲ್ಲ; ಇನ್ನೂರು ವರ್ಷಗಳಿಂದಲೂ ಬಳಕೆಯಲ್ಲಿರುವ ತತ್ವವಾಗಿದೆ. ಉಳಿದ ವಾದಗಳೆಲ್ಲವೂ ಅದಕ್ಕೆ ಪ್ರತಿಯಾಗಿ ಹುಟ್ಟಿದ ವಾದಗಳು. ಅದನ್ನು ಮೊದಲಲ್ಲಿ ಅರ್ಥಮಾಡಿಕೊಂಡ ಹೊರತು ಇತರ ವಾದಗಳು ಅರ್ಥವಾಗುವಹಾಗಿಲ್ಲ. ಈ ಕಾರಣದಿಂದ ಅದನ್ನೇ ಇಲ್ಲಿ ಮೊದಲು ವಿವರಿಸಿದೆ. ಪ್ರಜಾಪ್ರತಿನಿಧಿಪ್ರಭುತ್ವ ತತ್ವವನ್ನು ಹತ್ತೊಂಬತ್ತನೆಯ ಶತಮಾನದಲ್ಲಿ ಮಿಲ್ ಮೊದಲಾದ ತಾತ್ವಿಕರು ಸಮರ್ಥಿಸಿದರು. ಅದರ ಮೂಲತತ್ವಗಳು ಈಗಲೂ ಬಹುಮಟ್ಟಿಗೆ ಹಾಗೆಯೇ ಉಳಿದಿವೆ.

# I. ಪ್ರಜಾಪ್ರತಿನಿಧಿ ಪ್ರಭುತ್ವ

ಸರ್ಕಾರವಿರುವುದು ಪ್ರಜೆಗಳಿಗಾಗಿ, ಅದರ ಅಧಿಕಾರ ನಿಂತಿರುವುದು ಪ್ರಜೆಗಳ ಅನುಮತಿಯ ಮೇಲೆ; ಸರ್ಕಾರವೆಂಬುದು ಸಾರ್ವಜನಿಕಹಿತಕ್ಕಾಗಿ ಜನರೇ ಏರ್ಪಡಿಸಿಕೊಂಡ ಸಂಸ್ಥೆ. ಇದನ್ನು ನಡಸಲು ಜನರು ತಮ್ಮ ಪ್ರತಿನಿಧಿಗಳಾದ ಕೆಲವರನ್ನು ಚುನಾಯಿಸಿ ಪ್ರತಿನಿಧಿಸಭೆಗಳನ್ನು ಏರ್ಪಡಿಸುವರು. ಸರ್ಕಾರದ ಯಂತ್ರ ತಾನೇತಾನಾಗಿ ನಡೆಯುವುದಿಲ್ಲ. ಇದನ್ನು ನಡಸಲು ಎಲ್ಲರೂ ತಮ್ಮ ಸಹಾಯಹಸ್ತವನ್ನು ನೀಡಬೇಕು. ಸರ್ಕಾರದ ಗುಣದೋಷಗಳು ದೇಶದ ಜನರ ಗುಣದೋಷಗಳನ್ನು ಅವಲಂಬಿಸಿವೆ. ಜನರಲ್ಲಿರುವ ಸದ್ಗುಣಗಳನ್ನು ಉಪಯೋಗಪಡಿಸಿಕೊಂಡು ಅವರ ಏಳಿಗೆಗಾಗಿ ದುಡಿಯುವುದು ಸರ್ಕಾರದ ಕರ್ತವ್ಯ. ಪ್ರಭುತ್ವಶಕ್ತಿ ಜನತೆಯಲ್ಲಿ ಅಂತರ್ಗತವಾಗಿವೆ. ಅದನ್ನು ಕಾರ್ಯರೂಪಕ್ಕೆ ತರಬಲ್ಲವರು ಕಾಲದಿಂದ ಕಾಲಕ್ಕೆ ತಮಗೆ ಬೇಕಾದ ಸರ್ಕಾರವನ್ನು ರಚಿಸುವರು. ಪ್ರಕೃತಿಯಲ್ಲಿರುವ ಭೌತಶಕ್ತಿ ಯಂತ್ರಶಕ್ತಿಗೆ ಕಾರಣವಾಗಿರುವಂತೆ ಪ್ರಜೆಗಳಲ್ಲಿರುವ ಪ್ರಭುತ್ವಶಕ್ತಿಯು ಸರ್ಕಾರವೆಂಬ ಯಂತ್ರಶಕ್ತಿಗೆ ಕಾರಣವಾಗಿದೆ. ಪ್ರಜಾಪ್ರತಿನಿಧಿಸಭೆಯ ಕೆಲಸ ಸರ್ಕಾರವನ್ನು ನಡಸುವುದಲ್ಲ. ಆದರೆ ಅದು ಸರ್ಕಾರದ ಮೇಲೆ ತನ್ನ ಹತೋಟಿಯನ್ನಿಟ್ಟಿರಬಲ್ಲದು. ಸರ್ಕಾರವು ಪ್ರಜೆಗಳ ಪರವಾಗಿ ತಾನು ಮಾಡುವ ಕಾರ್ಯಕ್ರಮಗಳ ವರದಿಯನ್ನು ಒಪ್ಪಿಸುತ್ತಿರಬೇಕು. ಪ್ರತಿನಿಧಿಗಳು ಪ್ರತಿನಿಧಿಸಭೆಯಲ್ಲಿ ಎತ್ತಿದ ಆಕ್ಷೇಪಗಳಿಗೆ ಸರ್ಕಾರವು ಸಮಾಧಾನ ಹೇಳಬೇಕು. ಸರ್ಕಾರವು ತನ್ನ ಜವಾಬ್ದಾರಿಯನ್ನು ಮರೆತಾಗ ಪ್ರತಿನಿಧಿಸಭೆಯು ಅದನ್ನು ಎಚ್ಚರಗೊಳಿಸುವುದು. ದಾರಿತಪ್ಪಿ ನಡೆದರೆ ಅದನ್ನು ಖಂಡಿಸುವುದು.

ಜನಾಂಗದ ಇಚ್ಛೆ ಸಂಕಲ್ಪಗಳಿಗೆ ವಿರೋಧವಾಗಿ ಒಂದು ಸರ್ಕಾರವು ನಡೆದರೆ ಪ್ರತಿನಿಧಿಸಭೆ ಅದನ್ನು ತೆಗೆದುಹಾಕಿ ಹೊಸ ಸರ್ಕಾರವನ್ನು ಏರ್ಪಡಿಸುವುದು. ಇದು ಪ್ರಜಾಪ್ರತಿನಿಧಿ ಪ್ರಭುತ್ವಪದ್ಧತಿ.

ಇದು ಫಲಕಾರಿಯಾಗಬೇಕಾದರೆ ಜನರ ವಿದ್ಯೆಯ ಮಟ್ಟವು ಹೆಚ್ಚಿನದಾಗಿರಬೇಕು, ಅವರು ರಾಜಕೀಯ ವಿಷಯಗಳನ್ನು ಅರ್ಥಮಾಡಿಕೊಳ್ಳುವಷ್ಟು ರಾಜಕೀಯ ಶಿಕ್ಷಣವನ್ನು ಪಡೆದಿರಬೇಕು. ಸಾರ್ವಜನಿಕ ಹಿತವನ್ನೇ ಗುರಿಯಾಗಿಟ್ಟುಕೊಂಡು ಕೆಲಸಮಾಡುವ ರಾಜಕೀಯ ಪಂಗಡಗಳಿರಬೇಕು. ಪ್ರತಿನಿಧಿ ಸಭೆಗಳ ಸದಸ್ಯರಾಗಿರುವವರು ಸ್ವಾರ್ಥಪರರಾಗಲಿ ಅಸಮರ್ಥರಾಗಲಿ ಆದರೆ ಪ್ರಜಾಪ್ರಭುತ್ವವು ಮುರಿದುಬೀಳುವುದು. ಕೋಮುವಾರು ದೃಷ್ಟಿ ಕೂಡ ಸಾರ್ವಜನಿಕ ಹಿತಕ್ಕೆ ಬಾಧಕವೇ.

ಪ್ರಜಾಪ್ರಭುತ್ವತತ್ವವನ್ನು ಈ ಅಪಾಯಗಳಿಂದ ಪಾರು ಮಾಡಿ ಸಾರ್ವಜನಿಕಕ್ಷೇಮಕ್ಕಾಗಿ ಇದನ್ನು ಉಪಯೋಗಿಸಿಕೊಳ್ಳುವುದು ಹೇಗೆ ಎಂಬುದು ಇಂದು ಪ್ರಜಾಪ್ರಭುತ್ವರಾಷ್ಟ್ರಗಳ ದೊಡ್ಡ ಸಮಸ್ಯೆಯಾಗಿದೆ. ಈ ಪದ್ಧತಿಯಿಂದ ಬಹುಸಂಖ್ಯಾತರಿಗೆ ಯಾವ ಅನುಕೂಲಗಳು ದೊರೆಯಬಹುದೋ ಅವನ್ನು ಅಲ್ಪಸಂಖ್ಯಾತರಿಗೂ ದೊರಕಿಸುವ ಏರ್ಪಾಡನ್ನು ಮಾಡಬೇಕೆಂಬುದೂ, ಪುರುಷರಿಗೆ ಹೇಗೋ ಹಾಗೆಯೇ ಸ್ತ್ರೀಯರಿಗೂ ಸಂಪೂರ್ಣ ಪ್ರಾತಿನಿಧ್ಯವಿರಬೇಕೆಂಬುದೂ ಎಲ್ಲರ ಅಭಿಮತಕ್ಕನುಸಾರವಾಗಿ ಎಲ್ಲರ ಸೌಖ್ಯವನ್ನು ಗಳಿಸಬೇಕೆಂಬುದೂ ಪ್ರಜಾಪ್ರಭುತ್ವದ ಮುಖ್ಯಧ್ಯೇಯ.

ಈ ಧ್ಯೇಯ ಈಗಿನ ಪ್ರಜಾಪ್ರಭುತ್ವರಾಜ್ಯಗಳೊಂದರಲ್ಲೂ ಪೂರ್ಣವಾಗಿ ಸಿದ್ಧಿಸಿಲ್ಲವಾದುದರಿಂದ ಪ್ರಜಾಪ್ರಭುತ್ವಕ್ರಮವು

ನಿಷ್ಫಲವೆಂದೂ, ರಾಷ್ಟ್ರದ ದೌರ್ಬಲ್ಯಕ್ಕೆ ಕಾರಣವಾಗುವುದೆಂದೂ ಎಣಿಸಿ ಕೆಲವು ರಾಷ್ಟ್ರಗಳು ಸರ್ವಾಧಿಕಾರಿ ರಾಷ್ಟ್ರಗಳಾದುವು. ಇವು ಪ್ರಜಾಪ್ರತಿನಿಧಿಪ್ರಭುತ್ವವನ್ನು ತಾವು ತೊರೆದುದಲ್ಲದೆ ಅದನ್ನು ಎಲ್ಲೆಲ್ಲೂ ನಿರ್ಮೂಲಮಾಡಬೇಕೆಂದು ಪ್ರಯತ್ನಿಸುತ್ತಿವೆ.

## II ಸಮಾಜ ಸ್ವಾಮ್ಯವಾದ
## (ಸೋಷಿಯಲಿಸಂ)

ಸಮಾಜ ಸ್ವಾಮ್ಯವಾದವು (ಸೋಷಿಯಲಿಸಂ), ರಾಷ್ಟ್ರ ಸ್ವಾಮ್ಯವಾದ (ಸ್ಟೇಟ್ ಸೋಷಿಯಲಿಸಂ), ಗಣಸ್ವಾಮ್ಯವಾದ (ಗಿಲ್ಡ್ ಸೋಷಿಯಲಿಸಂ), ಸಾಮೂಹಿಕ ಸ್ವಾಮ್ಯವಾದ (ಕಮ್ಯೂನಿಸಂ) ಎಂಬ ಪ್ರಭೇದಗಳನ್ನೊಳಕೊಂಡಿದೆ. ದೇಶದ ಸಂಪಜ್ಜನಕ ಸಂಸ್ಥೆಗಳು ಯಾರ ಸ್ವಾಮ್ಯಕ್ಕೆ ಒಳಪಡಬೇಕು? ಸರ್ಕಾರಕ್ಕೇ, ಅಥವಾ ಬೇರೆ ಬೇರೆ ವೃತ್ತಿಗೆ ಸಂಬಂಧಪಟ್ಟ ಗಣಗಳಿಗೇ, ಅಥವಾ ಸಮಾಜದಲ್ಲೇರ್ಪಟ್ಟಿರುವ ಬೇರೆ ಬೇರೆ ಸಮೂಹಗಳಿಗೇ—ಈ ಪ್ರಶ್ನೆಗೆ ಕೊಡುವ ಭಿನ್ನ ಭಿನ್ನವಾದ ಉತ್ತರಗಳೇ ಸಮಾಜ ಸ್ವಾಮ್ಯವಾದದ ಪ್ರಭೇದಗಳಿಗೆ ಕಾರಣ. ಇದೊಂದನ್ನೂ ಇಲ್ಲಿ ವಿವರಿಸಲು ಅವಕಾಶವಿಲ್ಲ. ಸಮಾಜ ಸ್ವಾಮ್ಯವಾದದ ತತ್ವಗಳಿಗೆ ಕಾರ್ಲ್‌ಮಾರ್ಕ್ಸ್ ಮತ್ತು ಎಂಗಲ್ಸ್ ಎಂಬವರು ನಿಷ್ಕೃಷ್ಟವಾದ ತಾತ್ವಿಕ ರೂಪವನ್ನು ಕೊಟ್ಟವರಾದ್ದರಿಂದ ಇವರಿಬ್ಬರ ವಾದಗಳಲ್ಲಿ ಅಡಗಿರುವ ತತ್ವಗಳನ್ನು ಮಾತ್ರ ಇಲ್ಲಿ ವಿವರಿಸಿದೆ.

ಕೈಗಾರಿಕೆಯ ಕ್ರಾಂತಿಯಾದನಂತರ ಪಾಶ್ಚಾತ್ಯ ಸಮಾಜದಲ್ಲಿ ಆಸ್ತಿವಂತರು—ಆಸ್ತಿಯಿಲ್ಲದವರು, ಧನಿಕರು—ದರಿದ್ರರು ಎಂಬ ಎರಡು ಪಂಗಡಗಳು ಹುಟ್ಟಿಕೊಂಡವು. ಧನಿಕರು

ಹೆಚ್ಚು ಹೆಚ್ಚಾಗಿ ಧನಿಕರಾಗುತ್ತಲೇ ಹೋದರು. ಬಡವರು ದಟ್ಟದರಿದ್ರರಾಗುತ್ತ ಬಂದರು. ಹಳ್ಳಿಗಳಿಂದ ಜೀವನೋಪಾಯಗಳನ್ನು ಹುಡುಕಿಕೊಂಡು ಬಂದಿದ್ದ ಸಾವಿರಾರು ಕೆಲಸಗಾರರು ಕೂಲಿಗಾಗಿ ಗಿರಣಿಗಳಲ್ಲಿ ಹಗಲೂ ರಾತ್ರಿ ದುಡಿದರೂ ಅವರ ಜೀವನಕ್ಕೆ ಸಾಕಾದಷ್ಟು ಸಂಪಾದನೆ ಇಲ್ಲವಾಯಿತು. ಆದರೆ ಬಂಡವಾಳಗಾರರು ಮಾತ್ರ ಲಕ್ಷಗಟ್ಟಲೆ ಲಾಭ ಸಂಪಾದಿಸಿ ಸುಖಲೋಲುಪರಾದರು. ಹೆಚ್ಚುಕಡಮೆ ಯೂರೋಪಿನ ರಾಷ್ಟ್ರಗಳಲ್ಲೆಲ್ಲಾ ಇದೇ ಪರಿಸ್ಥಿತಿ ಒದಗಿದ್ದಿತು. ಉಳ್ಳವರಿಗೂ ಇಲ್ಲದವರಿಗೂ ಹೋರಾಟ ಮೊದಲಾಯಿತು. ಇದಕ್ಕೆ ಕಾರ್ಲ್ ಮಾರ್ಕ್ಸ್‌ನು ವರ್ಗಯುದ್ಧ (ಕ್ಲಾಸ್ ವಾರ್) ವೆಂಬ ಹೆಸರನ್ನು ಕೊಟ್ಟಿರುತ್ತಾನೆ. ಅವನು ಈ ಸಾಮಾಜಿಕ ಪರಿಸ್ಥಿತಿಗಳಿಗೆ ಅನುರೂಪವಾದ ರಾಜಕೀಯ ವಾದವನ್ನು ಹೂಡಿದನು. ಈ ವಾದಕ್ಕೆ ಕಮ್ಯೂನಿಸಂ ಎಂದು ಹೆಸರು. ಸಮಾಜದಲ್ಲಿ ಧನಿಕವರ್ಗ ದರಿದ್ರವರ್ಗವೆಂಬ ವರ್ಗಭೇದವನ್ನು ನಿರ್ಮೂಲ ಮಾಡಿ ವರ್ಗರಹಿತವಾದ ಸಮಾಜವನ್ನು ನಿರ್ಮಿಸುವುದು ಇವನ ಅಂತಿಮ ಧ್ಯೇಯ.

ಅನಿಷ್ಟಕ್ಕೆಲ್ಲಾ ಶನೀಶ್ವರ ಗುರಿ ಎಂಬಂತೆ ಸಮಾಜದ ಅನಿಷ್ಟಗಳಿಗೆಲ್ಲಾ ಆಸ್ತಿಯೇ ಕಾರಣ ಎಂದು ಇವನ ಭಾವನೆ. ಆಸ್ತಿಪಾಸ್ತಿಗಳನ್ನು ಸಾಮೂಹಿಕ ಸ್ವಾಮ್ಯಕ್ಕೆ ಒಪ್ಪಿಸುವುದೇ ಇದಕ್ಕೆ ಸರಿಯಾದ ಪರಿಹಾರವೆಂದು ಅವನು ಸಾರಿದನು. ಸಮಾಜಕ್ಕೆ ಬೇಕಾದ ಸಮಸ್ತ ವಸ್ತುಗಳನ್ನೂ ಸೌಕರ್ಯಗಳನ್ನೂ ನಿರ್ಮಾಣ ಮಾಡುವ ಕ್ಷೇತ್ರಗಳೂ ಯಂತ್ರಗಳೂ ಯಾವ ಒಬ್ಬ ವ್ಯಕ್ತಿಗಾಗಲಿ ಒಂದು ಸರ್ಕಾರಕ್ಕಾಗಲಿ ಸೇರದೆ ಅವುಗಳನ್ನು ವಿಚಕ್ಷಣೆಯಿಂದ ರಕ್ಷಿಸಬಲ್ಲ ಸಮೂಹಗಳ ಸ್ವಾಮ್ಯಕ್ಕೆ ಒಳಪಡಿಸ

ಬೇಕು. "ಪ್ರತಿಯೊಬ್ಬನಿಂದಲೂ ಅವನ ಶಕ್ತಿಗನುಗುಣವಾಗಿ ಕೆಲಸ ತೆಗೆದುಕೊಳ್ಳುವುದು, ಪ್ರತಿಯೊಬ್ಬನಿಗೂ ಅವನಿಗೆ ಆವಶ್ಯಕವಾದಷ್ಟು ಕೊಡುವುದು"—ಇದು ಸಾಮೂಹಿಕ ಪ್ರಭುತ್ವದ ಮೂಲಸೂತ್ರ. ಸಾಮೂಹಿಕ ಪ್ರಭುತ್ವ ರಾಷ್ಟ್ರದಲ್ಲಿ ಯಾರೊಬ್ಬರೂ ದುಡಿಯದಿರಲಾಗದು; ದುಡಿಯುವವನು ಯಾವನೂ ಹಸಿದು ಇರಕೂಡದು. ಅಂದರೆ ಸಮಾಜದಲ್ಲಿ ದುಡಿಯುವವರು, ದುಡಿಯದವರೆಂಬ ಪಂಗಡಗಳೇ ಇರಬಾರದು. ಎಲ್ಲರೂ ಜೀವರು ಸುರಿಸಿ ದುಡಿಯಬೇಕು; ದುಡಿತದ ಫಲವನ್ನು ಎಲ್ಲರೂ ಸವಿಯಬೇಕು. ಮಾರ್ಕ್ಸ್‌ನ ಅಭಿಪ್ರಾಯದಲ್ಲಿ ಕೀಳು ಮೇಲು, ಧನಿಕ ದರಿದ್ರ ಎಂಬ ವ್ಯತ್ಯಾಸಗಳು ಅಳಿದು ಆರ್ಥಿಕ ಮತ್ತು ಸಾಮಾಜಿಕ ಸಮಾನತೆಗಳು ಎಂದು ಏರ್ಪಡುವುವೋ ಅಂದು ಪ್ರಪಂಚದಲ್ಲಿ ಸೌಖ್ಯ ಸಮೃದ್ಧಿ ಶಾಂತಿಗಳು ಏರ್ಪಡುವುವು. ಬಂಡವಾಳಗಾರರ ಬಲೆಗೆ ಸಿಕ್ಕಿರುವ ಪ್ರಜಾಪ್ರತಿನಿಧಿ ಪ್ರಭುತ್ವವಿರುವವರೆಗೂ ಇವು ಸಿದ್ಧಿಸುವಂತಿಲ್ಲ. ಪ್ರಜಾಪ್ರತಿನಿಧಿ ಪ್ರಭುತ್ವರಾಷ್ಟ್ರಗಳನ್ನು ಮಾರ್ಕ್ಸನ ಅನುಯಾಯಿಗಳು ಪ್ರಜಾಪ್ರಭುತ್ವವೇಷ ಹಾಕಿದ ಬಂಡವಾಳಗಾರರ ಪ್ರಭುತ್ವದ ರಾಷ್ಟ್ರಗಳೆಂದು ಹೀಯಾಳಿಸುವರು.

ಮಾರ್ಕ್ಸ್‌ನ ಅಭಿಪ್ರಾಯದಲ್ಲಿ ವರ್ಗವ್ಯತ್ಯಾಸಗಳಿಲ್ಲದ, ಅಂದರೆ ವರ್ಗರಹಿತವಾದ ಸಮಾಜವೇ ನಿಜವಾದ ಪ್ರಜಾಪ್ರಭುತ್ವ. ಅಂಥಾ ಸಮಾಜ ಬರುವವರೆಗೂ ಸರ್ಕಾರ ಆವಶ್ಯಕ. ಸಂಪೂರ್ಣ ಸಮಾನತೆ ಏರ್ಪಟ್ಟಮೇಲೆ ಅನಾವಶ್ಯಕವಾದ ಅಂಗವು ಕ್ರಮಕ್ರಮವಾಗಿ ಕ್ಷಯಿಸಿ ಲುಪ್ತವಾಗುವಂತೆ ಸರ್ಕಾರವೂ ಕ್ರಮಕ್ರಮವಾಗಿ ಕ್ಷಯಿಸಿ ಲುಪ್ತಹೊಂದುವುದು. ಇದನ್ನು ಸಾಧಿಸಲು ಬಹು ಸಂಖ್ಯಾತರಾದ ಕೆಲಸಗಾರರು

ಎರಡು ವಿಧವಾದ ಕಾರ್ಯಕ್ರಮವನ್ನು ಕೈಕೊಳ್ಳಬೇಕು. ಮೊದಲು ಬಂಡವಾಳಗಾರರನ್ನೂ ಅವರ ಕೈಗೊಂಬೆಯಾದ ಸರ್ಕಾರವನ್ನೂ ನಾಶಗೊಳಿಸಬೇಕು. ಅನಂತರ ವರ್ಗರಹಿತ ವಾದ ಸಮಾಜವನ್ನು ಸ್ಥಾಪಿಸಲು ಪ್ರಭುತ್ವವನ್ನು ಒಬ್ಬ ವಿಧಾಯಕನ ಕೈಗೊಪ್ಪಿಸಬೇಕು. ಇವನು ತನ್ನ ಕೆಲಸವನ್ನು ಮಾಡಿದ ಮೇಲೆ ಅವನ ವಿಧಾಯಕತ್ವವು ಅನಾವಶ್ಯಕವಾಗು ವುದು. ಕೂಲಿಗಾರರ ಈ ಕ್ರಾಂತಿ ಪ್ರಪಂಚವೆಲ್ಲವನ್ನೂ ಆವರಿಸ ಬೇಕೆಂದು ಮಾರ್ಕ್ಸ್‌ನ ಹೆಬ್ಬಯಕೆ.

ಯುದ್ಧವನ್ನೂ ಕ್ರಾಂತಿಯನ್ನೂ ಹೂಡದೆ ಶಾಂತಿಯುತ ವಾಗಿ ನ್ಯಾಯರೀತಿಯಿಂದ ಈ ಧ್ಯೇಯವನ್ನು ಸಾಧಿಸಬಾರದೇಕೆ ಎಂದು ಕೇಳಬಹುದು. ತೋಳದೊಂದಿಗೆ ಕುರಿ ವಾದಮಾಡಿ ತನ್ನ ಹಕ್ಕು ಬಾಧ್ಯತೆಗಳನ್ನು ಸಾಧಿಸಿಕೊಳ್ಳುವುದೂ ಬಂಡವಾಳ ಗಾರರೊಂದಿಗೆ ಕೂಲಿಗಾರರು ವಾದಮಾಡಿ ತಮ್ಮ ಹಕ್ಕುಬಾಧ್ಯ ತೆಗಳನ್ನು ಸಾಧಿಸಿಕೊಳ್ಳುವುದೂ ಒಂದೇ ಎಂದು ಈ ಪ್ರಶ್ನೆಗೆ ಮಾರ್ಕ್ಸ್ ಉತ್ತರ ಕೊಡುವನು.

ಕಾರ್ಲ್‌ಮಾರ್ಕ್ಸನಿಗೆ ಬಡವರಲ್ಲಿ, ಕೆಲಸಗಾರರಲ್ಲಿ ಇದ್ದ ಸಹಾನುಭೂತಿ ಕನಿಕರಗಳನ್ನು ಎಲ್ಲರೂ ಮೆಚ್ಚುವರು. ಸಮಾ ಜದಲ್ಲಿ ನ್ಯಾಯ ನೆಲಸಬೇಕೆಂಬುದೂ ಸ್ತೋತ್ರಾರ್ಹವಾದ ಗುರಿಯೇ. ಇಂದಿನ ಸಮಾಜಕ್ಕೆ ತಗುಲಿರುವ ರೋಗ ಪರಿಹಾರ ವಾಗಬೇಕೆಂದು ಮಾರ್ಕ್ಸ್‌ನು ಬಯಸಿದ ಬಯಕೆ ಅತ್ಯುತ್ಕೃ ಷ್ಟವಾದುದೇ ಸರಿ. ಆದರೆ ಆ ರೋಗವನ್ನು ವಾಸಿಮಾಡಲು ಅವನು ವಿಧಿಸಿದ ಔಷಧವು ಮಾತ್ರ ಅತಿ ದುಷ್ಟವಾದುದು; ಅದರಿಂದ ಈಗಿರುವ ರೋಗಕ್ಕಿಂತ ಇನ್ನೂ ಕೇಡಾದ ಅನೇಕ ರೋಗಗಳು ಹುಟ್ಟುವ ಸಂಭವವೇ ಹೆಚ್ಚು.

ಕಾರ್ಲ್ ಮಾರ್ಕ್ಸ್‌ನ ಧ್ಯೇಯಗಳನ್ನೇ ಕ್ರಮೇಣ ಶಾಂತಿ ಯುತವಾಗಿ ನ್ಯಾಯಬದ್ಧವಾಗಿ ಸಾಧಿಸಬಹುದೆಂದು ರಚನಾತ್ಮಕ ಸಮಾಜಸ್ವಾಮ್ಯವಾದಿಗಳ* ವಾದ. ಈ ವಾದವನ್ನು ಸಮರ್ಥಿಸಿದವರು ಇಂಗ್ಲೆಂಡಿನ ಫೇಬಿಯನ್ ಸಂಘದವರು. ಇಂಗ್ಲೆಂಡಿನ ಪ್ರಸಿದ್ಧ ಸಾಹಿತಿಯಾದ ಬರ್ನಾರ್ಡ್ ಷಾ ಈ ಸಂಘಕ್ಕೆ ಸೇರಿದವನು. ಫೇಬಿಯನ್ನರ ಧ್ಯೇಯಗಳೂ ಸಾಮೂಹಿಕ ಸ್ವಾಮ್ಯವಾದಿಗಳ ಧ್ಯೇಯಗಳೂ ಬಹುಮಟ್ಟಿಗೆ ಒಂದೇ ಆಗಿವೆ. ಈಗಿನ ಸಮಾಜವ್ಯವಸ್ಥೆ ಸಮರ್ಪಕವಾಗಿಲ್ಲ. ಬಂಡವಾಳಗಾರರಿಗೆ ಈಗಿನಂತೆ ಸ್ವೇಚ್ಛೆಯಾಗಿ ಹಣ ಗಂಟುಮಾಡುವ ಸ್ವಾತಂತ್ರ್ಯವಿರಕೂಡದು. ಕೂಲಿಗಾರರ ಬಾಳು ಈಗಿರುವುದಕ್ಕಿಂತಲೂ ಮೇಲಾಗಬೇಕು. ಪ್ರಪಂಚದ ಕೆಲಸಗಾರರೆಲ್ಲ ಒಂದಾಗಿ ತಮ್ಮ ಸಂಘಶಕ್ತಿಯನ್ನು ಬೆಳಸಿಕೊಳ್ಳಬೇಕು. ಇದಕ್ಕಾಗಿ ಲೇಬರ್ ಯೂನಿಯನ್ ಮೊದಲಾದ ಕೆಲಸಗಾರರ ಸಂಘಗಳನ್ನು ಏರ್ಪಡಿಸಿಕೊಂಡು ಐಕಮತ್ಯದಿಂದ ವರ್ತಿಸಬೇಕು. ಸರ್ಕಾರವು ತಾನು ಮಾಡುವ ಬರಿಯ ಪೋಲೀಸ್ ಕೆಲಸದಿಂದಲೇ ತೃಪ್ತಿಪಡೆಯ ಇರದೆ ಸಮಾಜಸುಧಾರಣೆಯ ಮತ್ತು ಪುನರ್ರಚನೆಯ ಕೆಲಸಗಳಲ್ಲಿ ತೊಡಗಬೇಕು. ದೊಡ್ಡ ದೊಡ್ಡ ಕೈಗಾರಿಕೆಗಳನ್ನೂ

---

*ಇವರನ್ನು ಇವೊಲ್ಯೂಷನರಿ ಸೋಷಿಯಲಿಸ್ಟ್ಸ್ ಎಂದು ಇಂಗ್ಲೀಷಿನಲ್ಲಿ ಕರೆಯುವರು. ಆ ಪದವನ್ನು ಅಕ್ಷರಶಃ ಭಾಷಾಂತರಿಸಿದರೆ ಅದು ಪರಿಣಾಮಾತ್ಮಕ ಸಮಾಜವಾದ ಎಂದಾಗುವುದು; ಆದರೆ ಈ ಶಬ್ದ ಅರ್ಥವಾಗುವುದಿಲ್ಲ. ಮುಖ್ಯವಾಗಿ ಈ ವಾದ ಹೂಡಿರುವವರ ಉದ್ದೇಶ ರಚನಾತ್ಮಕಕಾರ್ಯಕ್ರಮದ ಮೂಲಕ ಕ್ರಮಕ್ರಮವಾಗಿ ಸಮಾಜಸ್ವಾಮ್ಯವನ್ನು ಸಾಧಿಸಬೇಕೆಂಬುದು. ಆದುದರಿಂದ ಅವರ ವಾದವನ್ನು ರಚನಾತ್ಮಕ ಸಮಾಜಸ್ವಾಮ್ಯವಾದ ಎಂದು ಇಲ್ಲಿ ಕರೆದಿದೆ.

ಆರೋಗ್ಯ, ವಿದ್ಯಾಭ್ಯಾಸ, ವೃತ್ತಿ ಮುಂತಾದ ಸಾರ್ವಜನಿಕ ಸೌಕರ್ಯಗಳನ್ನೂ ಸರ್ಕಾರ ತನ್ನ ಆಡಳಿತದಲ್ಲಿ ಇಟ್ಟುಕೊಳ್ಳ ಬೇಕು. ಸರ್ಕಾರವು ಭೇದಭಾವವಿಲ್ಲದೆ ಪ್ರಜೆಗಳ ಪ್ರಯೋಜನ ಕ್ಕಾಗಿ ಸಂತತ ದುಡಿಯುವ ಸಂಸ್ಥೆಯಾಗಬೇಕು. ಈ ವಿಚಾರ ಗಳಲ್ಲಿ ಈ ಎರಡು ಪಂಗಡಗಳವರಿಗೂ ಸಾಮ್ಯವಿದೆ. ಆದರೆ ಇವನ್ನೆಲ್ಲಾ ಸಾಧಿಸಬೇಕಾದ ಕ್ರಮಮಾತ್ರ ಬೇರೆ ಬೇರೆಯಾ ಗಿದೆ. ಫೇಬಿಯನ್ನರದು ಕ್ರಮಬದ್ಧವಾದ ಸಮಾಜಸ್ವಾಮ್ಯ ವಾದ, ಸಾಮೂಹಿಕ ಸ್ವಾಮ್ಯವಾದಿಗಳದು ಕ್ರಾಂತಿವಾದ; ಒಂದು ರಚನಾತ್ಮಕ ಕ್ರಮ, ಇನ್ನೊಂದು ವಿನಾಶಾತ್ಮಕಕ್ರಮ; ಒಬ್ಬರು ಇದ್ದದ್ದನ್ನೆ ಸ್ವಲ್ಪ ಬದಲಾಯಿಸಿ ನಮಗೆ ಬೇಕಾದ ಹಾಗೆ ರಚಿಸಿಕೊಳ್ಳೋಣ ಎಂದು ಹೇಳುವರು; ಇನ್ನೊಬ್ಬರು ಇದ್ದದ್ದನ್ನೆಲ್ಲಾ ಧ್ವಂಸಮಾಡಿ ನಮಗೆ ಬೇಕಾದುದನ್ನೆಲ್ಲಾ ಹೊಸದಾಗಿ ಸೃಷ್ಟಿಸೋಣ ಎಂದು ಹೇಳುವರು.

## III ಫ್ಯಾಸಿಸಂ ತತ್ವ

"ಪ್ರಜಾಪ್ರಭುತ್ವ ಸ್ಥಾಪನೆಗಾಗಿ ಪ್ರಪಂಚವನ್ನು ಹದಗೊ ಳಿಸಲು ಹೂಡಿದ ಯುದ್ಧ" ವೆಂದು ಕಳೆದ ಮಹಾಯುದ್ಧವು ವರ್ಣಿಸಲ್ಪಟ್ಟಿದೆ. ಈ ಧ್ಯೇಯವು ಯೂರೋಪಿನ ಪ್ರಜಾ ಪ್ರಭುತ್ವ ರಾಷ್ಟ್ರಗಳಲ್ಲಿ ಅಭೂತಪೂರ್ವವಾದ ಉತ್ಸಾಹವನ್ನು ಹುಟ್ಟಿಸಿತು. ಪ್ರಜಾಪ್ರಭುತ್ವ ರಾಷ್ಟ್ರಗಳು ಜಯಶಾಲಿಗಳಾ ದುವು. ಯುದ್ಧವಾದ ಮೇಲೆ ಇಟಲಿ ದೇಶದವರು ತಮ್ಮ ಜಯದಿಂದ ತಾವು ನಿರೀಕ್ಷಿಸುತ್ತಿದ್ದ ಫಲವನ್ನು ಪಡೆಯಲಿಲ್ಲ. ಇಟಲಿಯ ಸರ್ಕಾರವು ಇಂಗ್ಲೆಂಡು ಮತ್ತು ಫ್ರಾನ್ಸ್ ಸರ್ಕಾರ ಗಳ ಕೈಗೊಂಬೆಯಾಯಿತು. ಇಟಲಿಯ ಆರ್ಥಿಕ ಮತ್ತು

ಸಾಮಾಜಿಕ ಪರಿಸ್ಥಿತಿಗಳು ತೀರ ಕೆಟ್ಟುವು. ಸಾಮೂಹಿಕ ಸ್ವಾಮ್ಯವಾದವು ತಲೆಯೆತ್ತಿತು. ತನ್ನ ದೇಶವನ್ನು ಪ್ರಜಾಪ್ರಭುತ್ವ ರಾಷ್ಟ್ರಗಳ ಮತ್ತು ಸಾಮೂಹಿಕ ಸ್ವಾಮ್ಯವಾದಿಗಳ ಸೋಂಕಿನಿಂದ ಬಿಡುಗಡೆಮಾಡಿ ಇಟಲಿಯ ರಾಜಕೀಯವನ್ನು ಪುನರುಜ್ಜೀವನಗೊಳಿಸಲು ವಿಧಾಯಕ ರಾಜ್ಯಾಡಳಿತ ಪದ್ಧತಿಯನ್ನು ಸ್ಥಾಪಿಸಬೇಕೆಂದು ಮುಸೋಲಿನಿ ಪ್ರಯತ್ನಪಟ್ಟನು. ದೇಶದ ಯುವಕರನ್ನು ತನ್ನ ಅಭಿಮತಕ್ಕೆ ಒಲಿಸಿಕೊಂಡು ಫ್ಯಾಸಿಸ್ಟ್ ಪಾರ್ಟಿಯನ್ನು ಸ್ಥಾಪನೆಮಾಡಿದನು. ತನ್ನ ಪಾರ್ಟಿಯು ಬಲಪಟ್ಟ ಒಡನೆಯೇ ೧೯೨೨ ನೆಯ ಆಕ್ಟೋಬರ್ ತಿಂಗಳು ೨೮ ನೆಯ ತಾರೀಖಿನ ದಿನ ರೋಂ ಸರ್ಕಾರವನ್ನು ವಶಪಡಿಸಿಕೊಂಡನು. ಅಂದು ಫ್ಯಾಸಿಸ್ಟ್ ರಾಷ್ಟ್ರವು ಉದಯವಾಯಿತು.

ಫ್ಯಾಸಿಸ್ಟ್ ರಾಷ್ಟ್ರಕ್ಕೆ "ಟೊಟೇಲಿಟೇರಿಯನ್" ಅಂದರೆ ಪ್ರಭುತ್ವವು ಒಂದೇ ಕಡೆ ಕೇಂದ್ರೀಕೃತವಾದ ರಾಷ್ಟ್ರ ಎಂದು ಹೆಸರು. ರಾಷ್ಟ್ರ ಸಂಸ್ಥೆಯು ಇತರ ಸಂಸ್ಥೆಗಳನ್ನೆಲ್ಲಾ ಒಳಕೊಂಡು ಅವುಗಳನ್ನು ಮೀರಿಸಿದ ಸಂಸ್ಥೆ. ಇದರ ರೀತಿನೀತಿಗಳು ಹೇಗಿರಬೇಕೆಂಬುದನ್ನು ವಿವರಿಸಿ ಮುಸೋಲಿನಿಯು ತಾನೇ ಒಂದು ಪುಸ್ತಕವನ್ನು ಬರೆದಿರುವನು. ಇದರಲ್ಲಿ ರಾಷ್ಟ್ರ ತತ್ವಕ್ಕಿಂತ ರಾಜಕೀಯ ನೀತಿಯೇ ಮುಖ್ಯ.

ರಾಷ್ಟ್ರದ ಸೇವೆಗಾಗಿಯೇ ಏರ್ಪಟ್ಟ ಪ್ರಭುಸಂಸ್ಥೆಯು ಫ್ಯಾಸಿಸ್ಟ್‌ಸಂಸ್ಥೆ. ಪ್ರಪಂಚದಲ್ಲಿ ಇಟಾಲಿಯನ್ ಜನರ ಮೇಲ್ಮೆಯನ್ನು ಸ್ಥಾಪಿಸುವುದು ಇದರ ಗುರಿ. ಇದಕ್ಕಾಗಿ ಇಟಲಿಯು ಬಲವಾದ ಸೈನ್ಯವನ್ನು ಏರ್ಪಡಿಸಬೇಕು; ಪ್ರತಿಯೊಬ್ಬ ಇಟಲಿ ದೇಶಸ್ಥನೂ ರಾಷ್ಟ್ರದ ಸೈನಿಕನಾಗಿ ಒಬ್ಬ ನಾಯಕನ ಸಿಸ್ತಿಗೆ

ವಿಧೇಯನಾಗಿ ನಡೆದುಕೊಳ್ಳಲು ಸಿದ್ಧನಾಗಿರಬೇಕು. ನಾಯಕನ ಆಜ್ಞೆಯನ್ನು ಉಲ್ಲಂಘಿಸಲು ಪ್ರಯತ್ನಪಡುವವನು ಪರಮ ದ್ರೋಹಿ. ದೇಶಕ್ಕೆಲ್ಲಾ ವಿಧಾಯಕನೇ ಪ್ರಭು. ಜನರೆಲ್ಲರೂ ಅವನ ಅನುಯಾಯಿಗಳು. ಎಲ್ಲರೂ ಫ್ಯಾಸಿಸ್ಟರು. ಪ್ರಜಾಪ್ರಭುತ್ವರಾಷ್ಟ್ರಗಳಲ್ಲಿರುವಂತೆ ಇಟಲಿಯಲ್ಲಿ ಬೇರೆಬೇರೆ ರಾಜಕೀಯ ಪಕ್ಷಗಳು ಇರಕೂಡದು.

ಮುಸೋಲಿನಿಯ ಅಭಿಪ್ರಾಯದಲ್ಲಿ ಇಟಲಿಯು ಸಾಮಾನ್ಯ ದೇಶವಲ್ಲ, ಅದು ಧರ್ಮಭೂಮಿ; ಅದರ ರಾಜ್ಯನೀತಿಯು ಬರಿಯ ರಾಜ್ಯನೀತಿಯಲ್ಲ, ಅದು ಜನಾಂಗದ ಮತ. ಶಕ್ತಿಯನ್ನು ಗಳಿಸುವುದು, ರೋಮನ್ ಸಾರ್ವಭೌಮತ್ವವನ್ನು ಸ್ಥಾಪಿಸುವುದು ಅದರ ಪರಮಪುರುಷಾರ್ಥ. ಈ ಪುರುಷಾರ್ಥಸಾಧನೆಗಾಗಿ ಪ್ರತಿಯೊಬ್ಬ ರೋಮನನೂ ತನ್ನ ತನುಮನಧನಗಳನ್ನು ಅರ್ಪಿಸಲು ಸಿದ್ಧವಾಗಿರಬೇಕು. ರಾಷ್ಟ್ರಕ್ಕಾಗಿ ರೋಮನನೇ ಹೊರತು, ರೋಮನನಿಗಾಗಿ ರಾಷ್ಟ್ರವಲ್ಲ. ಇದಕ್ಕೆ ಮುಖ್ಯವಾಗಿ ಸಿಸ್ತು ಬೇಕು. ಸಿಸ್ತನ್ನು ನೀಡುವವನು ರಾಷ್ಟ್ರನಾಯಕ. ಇದನ್ನು ಉಲ್ಲಂಘಿಸಿದವನು ರಾಷ್ಟ್ರದ್ರೋಹಿ. ಇಟಲಿರಾಷ್ಟ್ರದ ಸಾರ್ವಭೌಮತ್ವವೇ ಫ್ಯಾಸಿಸ್ಟ್‌ಪಾರ್ಟಿಯ ಮುಖ್ಯಗುರಿ.

ಜೀವನದ ಹೋರಾಟದಲ್ಲಿ ಯಾರು ಬಲಿಷ್ಠರೋ ಅವರು ಜಯಶೀಲರು. ದುರ್ಬಲರಿಗೆ ಈ ಪ್ರಪಂಚದಲ್ಲಿ ಸ್ಥಾನವಿಲ್ಲ. ಅಂತರ್ರಾಷ್ಟ್ರೀಯಜೀವನದಲ್ಲೂ ಹಾಗೆಯೇ; ಯಾವುದು ಶಕ್ತಿಯುತವಾದುದೋ ಅದಕ್ಕೇ ದೇವರು ತನ್ನ ಅಧಿಕಾರವನ್ನು ಕೊಡುವನು. ಆದುದರಿಂದ ಪ್ರಬುದ್ಧವಾದ ರಾಷ್ಟ್ರವು ಸರ್ವದಾ ಶಕ್ತಿಯನ್ನು ಗಳಿಸುತ್ತ ಯುದ್ಧದಲ್ಲಿ ತನ್ನ ಶಕ್ತಿಯನ್ನು ತೋರ್ಪ

ಡಿಸುತ್ತಿರಬೇಕು. ಸಂಗ್ರಾಮ ಮನೋಭಾವವನ್ನು ತೊರೆದ ರಾಷ್ಟ್ರ ನಿರ್ವೀರ್ಯವಾಗುವುದು. ಅದು ಈ ಪ್ರಪಂಚದ ರಣರಂಗದಲ್ಲಿ ಬಾಳಲಾರದು. ಪ್ರಪಂಚದಲ್ಲಿ ಶಾಶ್ವತ ಶಾಂತಿ ಸ್ಥಾಪನೆ ಮಾಡಬೇಕೆಂದು ಪ್ರಯತ್ನಪಡುವುದು ಪ್ರಗತಿಗೆ ವಿರುದ್ಧವಾದ ನೀತಿ. ವೀರವ್ರತ ಹಿಡಿದೇ ಜನಾಂಗವು ಮುಂದುವರಿಯಲು ಸಾಧ್ಯ. ಆದುದರಿಂದ ಚಿಕ್ಕಂದಿನಿಂದಲೂ ಶಾಲೆಗಳಲ್ಲಿ ಬಾಲಕ ಬಾಲಕಿಯರಿಗೆ ತಮ್ಮ ರಾಷ್ಟ್ರದ ವೀರ ರಲ್ಲಿ ಪೂಜ್ಯ ಭಾವನೆಯನ್ನು ಹುಟ್ಟಿಸಬೇಕು. ತಾವು ಉತ್ಕೃಷ್ಟ ರಾಷ್ಟ್ರದ ಉತ್ಕೃಷ್ಟ ಪ್ರಜೆಗಳೆಂಬ ಭಾವನೆ ಅವರ ಮನಸ್ಸಿನಲ್ಲಿ ಬೇರೂರಬೇಕು. ಪ್ರತಿಯೊಬ್ಬ ಯುವಕನಿಗೂ ಸಮರ ಶಿಕ್ಷಣ ಕೊಡಬೇಕು. ತಮ್ಮ ರಾಷ್ಟ್ರಕ್ಕಾಗಿ ತಮ್ಮ ತನು ಮನ ಧನಗಳನ್ನು ಅರ್ಪಿಸಲು ಸಿದ್ಧರಾಗಿರಬೇಕೆಂದು ಬೋಧಿಸ ಬೇಕು. ರೋಮನ್ ಸಾಮ್ರಾಜ್ಯದ ಗತವೈಭವ ಪುನಃ ಸ್ಥಾಪಿ ಸುವ ಕಾಲಬಂದಿದೆಯೆಂದು ಜನರ ಮನಸ್ಸಿನಲ್ಲಿ ಮೂಡಬೇಕು. ರಾಷ್ಟ್ರ ಒಂದು, ರಾಷ್ಟ್ರದ ಭಾಗ್ಯವಿಧಾತನೊಬ್ಬ, ಇಟಲಿಯ ಜನರು ಒಂದು, ಇಟಲಿಯ ಜನರ ಮನಸ್ಸು ಒಂದು ಎಂಬ ರಾಜಕೀಯ ಅದ್ವೈತ ಸಿದ್ಧಾಂತವು ಫ್ಯಾಸಿಸಮ್ಮಿನ ತಿರುಳು. ಈ ತತ್ವದ ಮೇಲೆ ಇಂದಿನ ಇಟಲಿಯ ಸರ್ವಾಧಿಕಾರ ಏರ್ಪಟ್ಟಿದೆ.

## IV ನಾಟ್ಸಿಸಂ ತತ್ವ

ನಾಟ್ಸಿಸಂ ಎಂಬ ಪದವು ನ್ಯಾಷನಲ್ ಸೋಷಿಯಲಿಸಮ್ ಎಂಬುದರ ಹ್ರಸ್ವರೂಪ. ರಾಷ್ಟ್ರೀಯ ಸ್ವಾಮ್ಯವೇ ಇದರ ಮೂಲತತ್ವ; ಹೆರ್ ಹಿಟ್ಲರ್ ಇದರ ಮುಖ್ಯ ಪ್ರತಿಪಾದಕ.

ಇವನಿಗೆ ತತ್ವರಕ್ಕಿಂತಲೂ ತತ್ವಸಿದ್ಧಿಯೇ ಮುಖ್ಯವಾದುದರಿಂದ ಇವನು ತನ್ನ ತತ್ವವನ್ನು ಸಾಮಾನ್ಯವಾಗಿ ತತ್ವಶಾಸ್ತ್ರಜ್ಞರು ವಿವರಿಸುವಂತೆ ತರ್ಕಬದ್ಧವಾದ ರೀತಿಯಲ್ಲಿ ವಿವರಿಸಿಲ್ಲ. "ಮೈನ್‌ಕ್ಯಾಂಪ್" ಅಂದರೆ "ನನ್ನ ಹೋರಾಟ" ಎಂಬ ತನ್ನ ಜೀವನಚರಿತ್ರೆಯ ಮೂಲಕ ತನ್ನ ತತ್ವವನ್ನು ಸೂಚಿಸಿರುವನು. ಕುಲದ ಹಿರಿಮೆಯೇ ರಾಷ್ಟ್ರದ ಹಿರಿಮೆ ಎಂಬುದು ನಾಟ್ಸಿಗಳ ಮೊದಲನೆಯ ತತ್ವ. ಪ್ರಪಂಚದಲ್ಲಿ ಅನೇಕ ಕುಲಗಳಿವೆ. ಆದರೆ ಅವೆಲ್ಲವೂ ಸಮಾನವೆಂದು ಭಾವಿಸಬಾರದು. ಕೆಲವು ಕುಲಗಳು ಉಚ್ಚವಾದುವು ಮತ್ತೆ ಕೆಲವು ಕುಲಗಳು ನೀಚವಾದುವು. ಉಚ್ಚವಾದ ಕುಲಗಳು ನೀಚವಾದ ಕುಲಗಳೊಡನೆ ಬಾಂಧವ್ಯವನ್ನು ಬೆಳಸಿದರೆ ಈ ಕುಲಸಂಕರದಿಂದ ಉತ್ತಮಕುಲದ ಪರಿಶುದ್ಧಿ ಕೆಡುವುದು. ಆದ್ದರಿಂದ ಕುಲಸಂಕರಕ್ಕೆ ಅವಕಾಶ ಕೊಡಕೂಡದು. ಜಗತ್ತಿನ ಮಾನವ ಕುಲಗಳಲ್ಲೆಲ್ಲಾ ಮೇಲಾದ ಕುಲ ಆರ್ಯಕುಲ. ಸಹಜವಾದ ತನ್ನ ಮೇಲ್ಮೆಯಿಂದ ಈ ಕುಲವು ಜಗತ್ತಿನ ಒಡೆತನಕ್ಕೆ ಅರ್ಹವಾದುದು. ಇಂದು ಮಾನವ ಸಂಸ್ಕೃತಿಯಲ್ಲಿ ಅತ್ಯುತ್ತಮವೆಂದೆನಿಸಿರುವ ಕಲೆ, ವಿಜ್ಞಾನ ಮುಂತಾದ ಶಾಸ್ತ್ರಗಳು ಆರ್ಯಕುಲದವರ ಪ್ರತಿಭೆಯಿಂದ ಉದಯಿಸಿದುವು. ಪ್ರಪಂಚಕ್ಕೆ ನಾಗರಿಕತೆಯನ್ನಿತ್ತವರು ಆರ್ಯರು. ಅವರು ತಮ್ಮ ಕುಲದ ಉತ್ಕೃಷ್ಟತೆಯನ್ನು ಉಳಿಸಿಕೊಳ್ಳಬೇಕಾದುದು ಅವರ ಮೊದಲನೆಯ ಕರ್ತವ್ಯ. ಅವರು ರಚಿಸಿದ ಸೌಂದರ್ಯಪ್ರಪಂಚ ಅಳಿದುಹೋಗದಂತಾಗಬೇಕಾದರೆ ಅವರು ಇತರ ಕುಲಗಳೊಡನೆ ಸಂಕರವಾಗದಂತೆ ನೋಡಿಕೊಳ್ಳಬೇಕು. ಕುಲದ ಪರಿಶುದ್ಧಿಯನ್ನು ಉಳಿಸಿಕೊಳ್ಳುವುದಕ್ಕೇ ನಾಟ್ಸಿರಾಜ್ಯದಲ್ಲಿ ಯೆಹೂದ್ಯರಿಗೆ ವಿರೋಧವಾದ ಚಳು

ವಳಿ ಹುಟ್ಟಿಮುದು. ಈ ಕುಲದ ಪರಿಶುದ್ಧಿ ಭಾವವನ್ನು ರಾಸೆನ್ ಬರ್ಗ್ ಎಂಬವನು ಜರ್ಮನಿಯ ಮತವೆಂದು ಕರೆದಿರುವನು.

ಎಲ್ಲ ಜನರೂ ಸಮಾನರು, ಎಲ್ಲರಿಗೂ ಸಮನಾದ ಹಕ್ಕುಗಳುಂಟು ಎಂಬ ಸಮತಾವಾದವನ್ನು ಹಿಟ್ಲರನು ಖಂಡಿಸುವನು. ಇವನ ಅಭಿಪ್ರಾಯದಲ್ಲಿ ಮೇಲಾದುವಕ್ಕೂ ಕೀಳಾದುದಕ್ಕೂ ಹೋರಾಟ ನಡೆಯುವುದು ಪ್ರಕೃತಿಯ ಧರ್ಮ. ಈ ಹೋರಾಟದಲ್ಲಿ ಮೇಲಾದ ಕುಲ ಜಯಿಸುವುದು, ಕೀಳಾದುದು ಸೋತುಹೋಗುವುದು. ಕಮ್ಯೂನಿಸಂ ತತ್ವವು ಕೂಲಿಗಾರರಲ್ಲಿ ತಮ್ಮ ವರ್ಗವೇ ಶ್ರೇಷ್ಠವಾದುದು ಎಂಬ ಮನೋಭಾವವನ್ನು ಹುಟ್ಟಿಸಿರುವಂತೆಯೇ ನಾಟ್ಸಿಸಂ ಜರ್ಮನಿಯ ಜನರಲ್ಲಿ ತಮ್ಮ ಕುಲವೇ ಶ್ರೇಷ್ಠವಾದುದೆಂಬ ಭಾವವನ್ನು ಹುಟ್ಟಿಸಿರುತ್ತದೆ.

ನಾಟ್ಸಿಸಮ್ಮಿನ ಇನ್ನೊಂದು ಮೂಲತತ್ವ ರಾಷ್ಟ್ರೀಯ ಮನೋಭಾವ—ಮಾನವವರ್ಗಕ್ಕಿಂತಲೂ ತನ್ನ ರಾಷ್ಟ್ರವೇ ಉತ್ತಮವಾದುದು ಎಂಬುದು. ಇದು ಅಂತರ್ರಾಷ್ಟ್ರೀಯ ಮನೋಭಾವಕ್ಕೆ ತೀರ ವಿರುದ್ಧವಾದದ್ದು. ಕುಲಗಳಲ್ಲೆಲ್ಲಾ ಒಂದು ಕುಲ ಶ್ರೇಷ್ಠವಾದುದು, ಹಾಗೆಯೇ ರಾಷ್ಟ್ರಗಳಲ್ಲೆಲ್ಲಾ ಒಂದು ರಾಷ್ಟ್ರ ಶ್ರೇಷ್ಠವಾದುದು: ಅದು ಜರ್ಮನ್ ರಾಷ್ಟ್ರ. ಆದ್ದರಿಂದ ಜಗತ್ತಿನ ಒಡೆತನ ಜರ್ಮನ್ ರಾಷ್ಟ್ರಕ್ಕೆ ನ್ಯಾಯವಾಗಿ ಸೇರಬೇಕಾದದ್ದು. ಜಗತ್ತಿನ ಒಡೆತನ ಉತ್ಕೃಷ್ಟ ರಾಷ್ಟ್ರಕ್ಕೆ ಸೇರಿರಬೇಕಾದಂತೆಯೇ ರಾಷ್ಟ್ರದ ಒಡೆತನ ರಾಷ್ಟ್ರದ ಪ್ರಜೆಗಳಲ್ಲಿ ಉತ್ಕೃಷ್ಟನಾದವನಿಗೆ ಸೇರಬೇಕು.

ಇದರಿಂದ ನಾಟ್ಸಿರಾಷ್ಟ್ರದ ಆಡಳಿತದಲ್ಲಿ ಸಾಮಾನ್ಯ ಜನರಿಗೆ ಯಾವ ಅಧಿಕಾರವೂ ಇಲ್ಲವೆಂಬುದು ವ್ಯಕ್ತಪಡುವುದು.

ರಾಷ್ಟ್ರದ ವಿಧಾಯಕನಿಗೆ ತಲೆಬಾಗಿ ನಡೆಯುವುದಕ್ಕೆಮಾತ್ರವೇ ಪ್ರಜೆಗಳು ಬಾಧ್ಯರು. “ ವಿಧೇಯನಾಗಿರುವುದೇ ಸಾಮಾನ್ಯವಾಗಿ ಮಾನವ ಜೀವನದ ವಿಧಿ ; ಸಾಮಾನ್ಯನಾದವನಿಗೆ ಇದಕ್ಕಿಂತಲೂ ಉತ್ತಮವಾಗಿ ಬಾಳುವ ಯೋಗ್ಯತೆಯೂ ಇಲ್ಲ, ಹಕ್ಕುಗಳೂ ಇಲ್ಲ ” ಎಂದು ನೆಪೋಲಿಯನ್ನನು ಹೇಳಿದನಂತೆ. ಹಿಟ್ಲರನ ಅಭಿಪ್ರಾಯವೂ ಅದೇ. “ ಆಲೋಚನಾಶಕ್ತಿ, ರಚನಾಶಕ್ತಿ, ಸಂಚಾಲಕಶಕ್ತಿ ಪ್ರಜಾಸಾಮಾನ್ಯಕ್ಕೆ ಇಲ್ಲ; ಅವು ಇರುವುದು ಒಬ್ಬೊಬ್ಬ ಮಹಾವ್ಯಕ್ತಿಯಲ್ಲಿ ಮಾತ್ರವೇ.” ಇಂತಹವನು ಮುಂದೆ ಬಂದು ಜನರ ನಾಯಕತ್ವವನ್ನು ಕೈಕೊಳ್ಳಲು ಅವಕಾಶಗಳನ್ನು ಕಲ್ಪಿಸಿಕೊಡುವುದು ಸಮಾಜದ ಕರ್ತವ್ಯವೆಂದು ಹಿಟ್ಲರನು ಭಾವಿಸಿರುವನು. ಈ ಭಾವವನ್ನು ಹಿಟ್ಲರ್ ಪಡೆದುದು ನೀತ್ಸ್ಚೇ ಮತ್ತು ಟ್ರೈಟ್‌ಸ್ಕಿ ಎಂಬ ಇಬ್ಬರು ತಾತ್ವಿಕರಿಂದ. ಅವರ ಭಾವನೆಯನ್ನು ಹಿಟ್ಲರನು ಕಾರ್ಯರೂಪಕ್ಕೆ ತಂದನು. ನೀತ್ಸ್ಚೇಯು ನಿರೂಪಿಸಿರುವ ಅತಿಮಾನುಷನಾಯಕನು ತಾನೇ ಎಂಬ ಭಾವನೆ ಹಿಟ್ಲರನಲ್ಲಿ ಬಲವಾಗಿ ಬೇರೂರಿದೆ. ಜನರು ಕೂಡ ಅವನನ್ನು ಅತಿಮಾನುಷನಾಯಕನೆಂದು ತಿಳಿದಿರುವರೆಂಬುದಕ್ಕೆ ಅವರು ಅವನಿಗೆ ಕೊಟ್ಟಿರುವ “ ದಿ ಫ್ಯೂರರ್ ” ಎಂಬ ಹೆಸರೇ ನಿದರ್ಶನ. ದಿ ಫ್ಯೂರರ್ ಅಂದರೆ ರಾಷ್ಟ್ರದ ಏಕಾಧಿಪತಿ ಎಂದು ಅರ್ಥ.

ಕುಲಗಳಲ್ಲಿ ಕೆಲವು ಉಚ್ಚ, ಕೆಲವು ನೀಚ ಎಂಬ ಈ ನಾಟ್ಸಿ ಭಾವನೆಗೆ ಶಾಸ್ತ್ರೀಯವಾದ ಆಧಾರವಿಲ್ಲವೆಂದು ಕುಲಶಾಸ್ತ್ರಜ್ಞರು ಹೇಳುವರು. ನಾಟ್ಸಿಗಳ ಕುಲಪ್ರತಿಷ್ಠೆಯಿಂದ ಕುಲವೈಷಮ್ಯಗಳು ಹೆಚ್ಚುವುದು ನಿಶ್ಚಯ. ಇವರ ರಾಷ್ಟ್ರೀಯಭಾವದಿಂದ ಜಗತ್ತಿನ ಶಾಂತಿ ನಾಶವಾಗುತ್ತಿರುವುದು ಎಲ್ಲರಿಗೂ ಗೋಚರವಾ

ಗಿವೆ. ಕುಲಶ್ರೇಷ್ಠತೆಯ ಹೆಸರಿನಲ್ಲಿ ಒಟ್ಟು ಮಾನವವರ್ಗವನ್ನೇ ತಿರಸ್ಕಾರಭಾವದಿಂದ ಕಾಣುವುದು ಮಾನವಧರ್ಮಕ್ಕೆ ವಿರುದ್ಧವಾದ ವರ್ತನೆ. ಇಂದು ಇವರ ಸರ್ವಾಧಿಕಾರ ತತ್ವದಿಂದ ಪ್ರಜಾಪ್ರಭುತ್ವಕ್ಕೆ ಆಪತ್ತು ಉಂಟಾಗಿದೆ. ಪ್ರಜಾಪ್ರಭುತ್ವವು ಈ ಆಪತ್ತಿನಿಂದ ಪಾರಾಗಿ ಪುನಃ ವಿಶ್ವದ ಸೌಖ್ಯವನ್ನೂ ಶಾಂತಿಯನ್ನೂ ಅಂತರ್ರಾಷ್ಟ್ರೀಯ ಸೌಹಾರ್ದವನ್ನೂ ಸ್ಥಾಪಿಸಬೇಕೆಂದು ಜನರು ಬಯಸುತ್ತಿರುವರು. ಫ್ಯಾಸಿಸಂ ಮತ್ತು ನಾಟ್ಸಿಸಂ— ಈ ತತ್ವಗಳಮೇಲೆ ವಿಶ್ವಶಾಂತಿಯನ್ನು ಸ್ಥಾಪಿಸಲು ಸಾಧ್ಯವಿಲ್ಲ. ಸರ್ವಾಧಿಕಾರತತ್ವವು ಕೇವಲ ತಾತ್ಕಾಲಿಕವಾಗಿ ಒಬ್ಬಿಬ್ಬರಿಗೆ ಅಥವಾ ಒಂದೆರಡು ಜನಾಂಗಗಳಿಗೆ ಉಪಯೋಗಕರವಾದುವೇ ಹೊರತು ಅದು ಚಿರಸ್ಥಾಯಿಯಾಗಿ ಉಳಿಯುವ ತತ್ವವಲ್ಲ. ಮಾನವನ ಅಮೂಲ್ಯವಾದ ಆಧ್ಯಾತ್ಮಿಕ ಸ್ವಾತಂತ್ರ್ಯಕ್ಕೆ, ಪರಮಪುರುಷಾರ್ಥಸಾಧನೆಗೆ ಫ್ಯಾಸಿಸಂ ಮತ್ತು ನಾಟ್ಸಿಸಂ ತತ್ವಗಳು ಕುಠಾರಪ್ರಾಯವಾದುವು.

## V ಅಂತರ್ರಾಷ್ಟ್ರೀಯತತ್ವ
## (ಇಂಟರ್‌ನ್ಯಾಷನಲಿಸಂ)

ವೇಗವಾದ ಸಂಚಾರಕ್ಕೆ ಅನುಕೂಲವಾದ ರೈಲು ಜಹಜು ಆಕಾಶವಿಮಾನಗಳ ನಿರ್ಮಾಣದಿಂದ ಇಂದು ಅತಿ ದೂರವಿರುವ ರಾಷ್ಟ್ರ ರಾಷ್ಟ್ರಗಳಿಗೆ ಸಂಬಂಧ ಬೆಳೆಯಲು ಅವಕಾಶ ಉಂಟಾಗಿದೆ. ಒಂದು ಕಡೆಯ ಸುದ್ದಿಗಳನ್ನು ಸಾವಿರಾರು ಮೈಲಿ ದೂರದಲ್ಲಿರುವ ದೇಶಗಳಿಗೆ ರೇಡಿಯೋ ಯಂತ್ರವು ಮರುಗಳಿಗೆಯಲ್ಲಿ ತಿಳಿಸಿಬಿಡುವುದು. ಇದರ ಮೂಲಕ ಸುದ್ದಿ ಮಾತ್ರವೇ ಅಲ್ಲದೆ ಪ್ರಚಾರ ಕಾರ್ಯವೂ ಹಬ್ಬುತ್ತಿದೆ. ಇಂತಹ

ಸನ್ನಿವೇಶದಲ್ಲಿ ಯಾವ ರಾಷ್ಟ್ರವು ಇತರ ರಾಷ್ಟ್ರಗಳ ಸಂಪರ್ಕವಿಲ್ಲದೆ ತಾನೇ ತಾನಾಗಿ ಇರಬಲ್ಲದು ? ಪ್ರಪಂಚದಲ್ಲಿ ಒಂದು ಕಡೆ ಯುದ್ಧ ಪ್ರಾರಂಭವಾದರೆ ಇದರ ಬಿಸಿ ಎಲ್ಲ ರಾಷ್ಟ್ರಗಳನ್ನೂ ಸ್ವಲ್ಪವಾಗಿಯಾಗಲಿ ಹೆಚ್ಚಾಗಿಯಾಗಲಿ ಮುಟ್ಟದೇ ಇರುವುದಿಲ್ಲ. "ನಂಟರ ಮನೆಗೆ ನಾಯಿ ಹೊಕ್ಕರೆ ಎಂಟು ಮನೆ ಏಕ" ಎಂದು ಹೇಳುವುದುಂಟು. ಹಾಗೆಯೇ ಒಂದು ರಾಷ್ಟ್ರದಲ್ಲಿ ಯುದ್ಧದ ಸೋಂಕು ತಲೆದೋರಿದರೆ, ಅದು ಎಲ್ಲಾ ರಾಷ್ಟ್ರಗಳಿಗೂ ಬಹು ವೇಗವಾಗಿ ಹರಡುತ್ತದೆ.

ಪ್ರಪಂಚದಲ್ಲಿ ಶಾಂತಿ ಸೌಖ್ಯಗಳು ಸ್ಥಾಪನೆಯಾಗಬೇಕಾದರೆ, ಪ್ರತಿ ರಾಷ್ಟ್ರವೂ ಅಂತರ್ರಾಷ್ಟ್ರೀಯ ನ್ಯಾಯ ನೀತಿಯನ್ನು ಪಾಲಿಸಬೇಕು. ಒಂದು ಸಮಾಜ ಕ್ಷೇಮವಾಗಿರಬೇಕಾದರೆ ಅದಕ್ಕೆ ಸೇರಿದ ಪ್ರತಿ ವ್ಯಕ್ತಿಯೂ ಇತರರೊಡನೆ ಸೌಹಾರ್ದದಿಂದ ವರ್ತಿಸುವುದನ್ನು ಕಲಿಯಬೇಕು. ಇದೇ ರೀತಿ ಒಟ್ಟು ಮಾನವಸಮಾಜ ಕ್ಷೇಮವಾಗಿರಬೇಕಾದರೆ ಅದಕ್ಕೆ ಸೇರಿದ ಪ್ರತಿರಾಷ್ಟ್ರವೂ ಇತರ ರಾಷ್ಟ್ರಗಳೊಡನೆ ಸೌಹಾರ್ದದಿಂದ ವರ್ತಿಸಬೇಕು. ಪಾಶ್ಚಾತ್ಯ ದೇಶಗಳಲ್ಲಿ ಈ ಅಂತರಾಷ್ಟ್ರೀಯ ನೀತಿಯನ್ನು ಮೊದಲು ಬೋಧಿಸಿದವನು ಹದಿನೇಳನೆಯ ಶತಮಾನದ ರಾಜನೀತಿಜ್ಞನಾದ ಗ್ರೋಷಿಯಸ್. ಇದನ್ನು ಅವನು "ಯುದ್ಧ ಮತ್ತು ಶಾಂತಿಯ ವಿಧಾನ" ಎಂಬ ತನ್ನ ಗ್ರಂಥದಲ್ಲಿ ದೀರ್ಘವಾಗಿ ವಿಮರ್ಶೆ ಮಾಡಿದ್ದಾನೆ. ಅವನು ಆಗ ಬರೆದ ಕೆಲವು ಮಾತುಗಳು ಇಂದಿನ ಪರಿಸ್ಥಿತಿಗಳಿಗೂ ಅನ್ವಯಿಸುವುವು. ಆ ಪುಸ್ತಕದಲ್ಲಿ ಒಂದು ಕಡೆ ಹೀಗೆ ಹೇಳಿರುತ್ತಾನೆ—"ಕ್ರೈಸ್ತ ಧರ್ಮದ ಅನುಯಾಯಿಗಳೆಂದು ಹೇಳಿಕೊಳ್ಳುವವರು ಯುದ್ಧದ ಸಮಯದಲ್ಲಿ ವರ್ತಿಸುವ ರೀತಿಯನ್ನು ನೋಡಿದರೆ ಅದು ಕಾಡು

ಜನರು ಕೂಡ ನಾಚಿಕೊಳ್ಳುವಂತಿದೆ. ಸೌಹಾರ್ದದಿಂದಲೇ ಸರಿಪಡಿಸಿಕೊಳ್ಳಬಹುದಾದ ಕೇವಲ ಸಣ್ಣ ವಿಷಯಗಳಿಗೆಲ್ಲಾ ದೊಡ್ಡ ಯುದ್ಧ ಹೂಡುವುದು ವಾಡಿಕೆಯಾಗಿಬಿಟ್ಟಿದೆ. ಯುದ್ಧ ಪ್ರಾರಂಭವಾಯಿತೆಂದರೆ ರಾಷ್ಟ್ರಗಳೂ ದೇವರೂ ಜನರೂ ವಿಧಿಸಿದ ನೀತಿನಿಯಮಗಳೆಲ್ಲಾ ಗಾಳಿಯಲ್ಲಿ ತೂರಿಕೊಂಡು ಹೋಗುತ್ತವೆ. ಇದರಿಂದ ಪ್ರಪಂಚದ ಸ್ಥಿತಿಯು ಭೀಕರವೂ ನರಕ ಪ್ರಾಯವೂ ಆಗಿಬಿಡುವುದು. ಇದರಿಂದ ಯಾರಿಗೂ ಲಾಭವಿಲ್ಲ.'' ಗ್ರೋಷಿಯುಸ್ಸನು ಹದಿನೇಳನೆಯ ಶತಮಾನದಲ್ಲಿ ವರ್ಣಿಸಿದ ಈ ರಾಜಕೀಯ ಸ್ಥಿತಿಗಿಂತ ಇಂದಿನ ರಾಜಕೀಯ ಸ್ಥಿತಿಯು ಉತ್ತಮವಾಗಿದೆಯೇ ?

ಯುದ್ಧದ ಮನೋಭಾವ ಯಾವಾಗಲೂ ಇರಲೇಬೇಕು, ಇದಿಲ್ಲದೆ ಮನುಷ್ಯನಿಗೆ ಏಳಿಗೆ ಇಲ್ಲ ಎಂಬ ಫ್ಯಾಸಿಸ್ಟ್ ಮತ್ತು ನಾಟ್ಸಿ ವಾದಕ್ಕೆ ಚರಿತ್ರೆಯ ಆಧಾರ ಸಾಲದು. ಮನುಷ್ಯನಿಗೆ ಯುದ್ಧದಿಂದ ಏಳಿಗೆ ಇಲ್ಲವೆಂಬುದು ಪ್ರಪಂಚದ ಚರಿತ್ರೆಯಿಂದ ನಾವು ಕಲಿಯಬೇಕಾದ ಪಾಠ. ರಾಷ್ಟ್ರದ ಅಭ್ಯುದಯಕ್ಕೆ ಉಪಯೋಗಿಸಬಹುದಾದ ಅಪಾರ ಸಂಪತ್ತನ್ನು ಯುದ್ಧಕ್ಕೆ ಖರ್ಚುಮಾಡಿದುದರ ಫಲವಾದರೂ ಏನು ? ಯುದ್ಧಕ್ಕಾಗಿ ಜನರು ಮಾಡುವ ಪ್ರಯತ್ನ, ಯುದ್ಧದಲ್ಲಿ ಜನರು ತೋರಿಸುವ ಸಾಹಸ—ಇವುಗಳನ್ನು ಕೃಷಿ, ಕೈಗಾರಿಕೆ, ವೈದ್ಯಚಿಕಿತ್ಸೆಗಳನ್ನು ಅಭಿವೃದ್ಧಿಗೊಳಿಸುವುದಕ್ಕೆ ಉಪಯೋಗಿಸಿದರೆ ನಮ್ಮ ಜೀವನವು ಎಷ್ಟು ಉತ್ತಮಪಡಬಹುದು ! ಈಗಿನ ಯುದ್ಧಗಳಲ್ಲಿ ಗೆದ್ದವರೂ ಸೋತವರೂ ಒಂದೇ ಸ್ಥಿತಿಗೆ ಇಳಿಯುವರೆಂಬುದು ಅನುಭವಸಿದ್ಧವಾದದ್ದು. ಇದನ್ನು ಮನಗಂಡೇ ಕೆಲವರು ಯುದ್ಧಕ್ಕೆ ಬಹಿಷ್ಕಾರ ಹಾಕುವ ಪ್ರಯತ್ನ

ಗಳನ್ನು ಮಾಡುತ್ತಿರುವರು. ರಾಷ್ಟ್ರರಾಷ್ಟ್ರಗಳಿಗೆ ವೈಮನಸ್ಯ ಉಂಟಾದಾಗ ಅಂತರರಾಷ್ಟ್ರೀಯ ಪಂಚಾಯಿತಿಯ ಮೂಲಕ ಶಾಂತ ರೀತಿಯಲ್ಲಿ ತಮ್ಮ ವ್ಯಾಜ್ಯಗಳನ್ನು ಬಗೆಹರಿಸಲು ಅಂತರ್ರಾಷ್ಟ್ರ ಸಂಘಗಳೂ ಏರ್ಪಟ್ಟುವು. ಆದರೆ ಈ ಪ್ರಯತ್ನಗಳಾಗಲಿ ಸಂಸ್ಥೆಗಳಾಗಲಿ ಫಲಕಾರಿಗಳಾಗಲಿಲ್ಲ. ಪ್ರಪಂಚದಲ್ಲಿ ಹೆಚ್ಚು ಹೆಚ್ಚಾಗಿ ಅಂತರ್ರಾಷ್ಟ್ರೀಯ ಮನೋಭಾವ ಬೆಳೆದ ಹೊರತು ವಿಶ್ವಶಾಂತಿಯನ್ನು ಗಳಿಸಲು ಸಾಧ್ಯವಿಲ್ಲವೆಂಬುದನ್ನು ಎಲ್ಲರೂ ನಂಬುತ್ತಾರೆ. ಎಲ್ಲೆಲ್ಲೂ ಅಂತರ್ರಾಷ್ಟ್ರೀಯ ಸಂಘದ ಶಾಖೆಗಳು ಏರ್ಪಟ್ಟಿವೆ. ಆದರೆ ಈ ಭಾವನೆಗೆ ಬಲಿಷ್ಠ ರಾಷ್ಟ್ರಗಳ ರಾಜ್ಯದಾಹವು ದೊಡ್ಡ ಅಡಚಣೆಯಾಗಿದೆ. ಪ್ರಪಂಚದ ಜನರೆಲ್ಲಾ ಶಾಂತಿಯನ್ನು ಬಯಸಿದರೂ, ರಾಜಕೀಯ ಪಟುಗಳು ಹೇಗೋ ಯುದ್ಧವನ್ನು ತಂದುಹಾಕುವರು. ಪ್ರಬಲ ರಾಷ್ಟ್ರಗಳ ಆಡಳಿತ ಸೂತ್ರಗಳನ್ನು ವಹಿಸಿರುವವರಲ್ಲಿ ನಿಜವಾದ ಅಂತರಶುದ್ಧಿ ಇದ್ದು ಅವರ ಮನಸ್ಸು ನ್ಯಾಯದ ಕಡೆಗೆ ಬಾಗಿದರೆ, ಯುದ್ಧವನ್ನು ನಿಲ್ಲಿಸುವುದೇನೂ ಕಷ್ಟವಲ್ಲ. ಆದರೆ ಒಂದೊಂದು ರಾಷ್ಟ್ರವೂ ಸ್ವಾರ್ಥದಲ್ಲೇ ಮಗ್ನವಾಗಿರುವುದರಿಂದ, ಒಂದುರಾಷ್ಟ್ರಕ್ಕೆ ಇನ್ನೊಂದು ರಾಷ್ಟ್ರದಲ್ಲಿ ನಂಬಿಕೆಯಿಲ್ಲ. ನಿಜವಾದ ನ್ಯಾಯ ಸಾಧನೆಗಾಗಿ ತ್ಯಾಗಬುದ್ಧಿಯಿಂದ ನಾಲ್ಕು ಪ್ರಬಲರಾಜ್ಯಗಳು ಸಹಕರಿಸಿದರೆ, ಯಾವುದಾದರೂ ಒಂದೆರಡು ರಾಷ್ಟ್ರಗಳು ದಾರಿತಪ್ಪಿ ಹೋದರೂ ಅವುಗಳನ್ನು ತಡೆದು ನಿಲ್ಲಿಸಬಹುದು. ಆದರೆ ಅನೇಕ ರಾಷ್ಟ್ರಗಳಿಗೆ ನ್ಯಾಯಬುದ್ಧಿಯೂ ಇಲ್ಲ, ತ್ಯಾಗಬುದ್ಧಿಯೂ ಇಲ್ಲ, ಇತರ ರಾಷ್ಟ್ರಗಳೊಡನೆ ವಂಚನೆಯಿಲ್ಲದೆ ಸಹಕರಿಸುವ ಮನೋಭಾವವೂ ಇಲ್ಲ. ಪಾಶ್ಚಾತ್ಯ ದೇಶಗಳಲ್ಲಿ ವ್ಯಕ್ತಿಗಳ ನಡವಳಿಯಲ್ಲಿ

ನ್ಯಾಯನಿಷ್ಠೆ, ಧರ್ಮನಿಷ್ಠೆ ಎಷ್ಟೆಷ್ಟು ಸಹಜವಾಗಿರುವುದೋ ಅದೇ ಜನರು ರಾಷ್ಟ್ರದಲ್ಲಿ ಸೇರಿ ಸಾಮೂಹಿಕವಾಗಿ ನಡೆದುಕೊಳ್ಳುವಾಗ ಅವರ ನ್ಯಾಯ ಮತ್ತು ಧರ್ಮನಿಷ್ಠೆಗಳು ಅಷ್ಟೊ ಅಷ್ಟು ಒರಟಾಗುತ್ತವೆ. ಒಂದು ಗಿರಣಿಯ ಮಾಲಿಕನನ್ನು ಗಿರಣಿಯ ಹೊರಗೆ ನೋಡಿದಾಗ ಅವನ ನಡತೆ ನಯ ವಿನಯಗಳಿಂದ ಕೂಡಿರುತ್ತದೆ. ಆದರೆ ಅದೇ ವ್ಯಕ್ತಿ ತನ್ನ ಕಾರ್ಖಾನೆಯಲ್ಲಿ ಕೂಲಿಗಾರರೊಡನೆ ವ್ಯವಹರಿಸುವಾಗ ನೋಡಿದರೆ ಆ ನಯವಿನಯಗಳು ಮಾಯವಾಗಿರುತ್ತವೆ. ಒಂದು ರಾಷ್ಟ್ರದ ಸರಕಾರ ತನ್ನ ಪ್ರಜೆಗಳ ಹಕ್ಕುಬಾಧ್ಯತೆಗಳ ವಿಚಾರವಾಗಿ ನ್ಯಾಯವಾಗಿ ನಡೆದುಕೊಳ್ಳಬಹುದು; ಆದರೆ ಅದೇ ರಾಷ್ಟ್ರವು ಇತರ ರಾಷ್ಟ್ರಗಳೊಡನೆ ವ್ಯವಹರಿಸುವಾಗ ಅದರ ನ್ಯಾಯಬುದ್ಧಿ ಸಡಿಲವಾಗುವುದು. ಹದಿನೇಳನೆಯ ಶತಮಾನದಲ್ಲಿಯೂ ಮತ್ತು ಅದಕ್ಕಿಂತ ಹಿಂದೆಯೂ ಪಾಶ್ಚಾತ್ಯ ದೇಶಗಳಲ್ಲಿ ಇಬ್ಬರಿಗೆ ವೈಮನಸ್ಯ ಹುಟ್ಟಿದಾಗ ಒಬ್ಬನು ಇನ್ನೊಬ್ಬನನ್ನು ಕತ್ತಿಯ ಯುದ್ಧಕ್ಕೆ ಕರೆಯುವುದು ವಾಡಿಕೆಯಾಗಿತ್ತು. ನ್ಯಾಯವನ್ನು ಕತ್ತಿಯುದ್ಧದ ಮೂಲಕ ತೀರ್ಮಾನಮಾಡಿಕೊಳ್ಳುವುದು ಅವಿವೇಕ, ಅಸಭ್ಯವರ್ತನೆಯೆಂದು ಅದನ್ನು ಈಗ್ಗೆ ಒಂದೆರಡು ಶತಮಾನಗಳ ಹಿಂದೆಯೇ ನಿಲ್ಲಿಸಿಬಿಟ್ಟರು. ಅದೇ ರಾಷ್ಟ್ರರಾಷ್ಟ್ರಗಳು ತಮ್ಮ ರಾಷ್ಟ್ರೀಯ ನ್ಯಾಯಾನ್ಯಾಯಗಳನ್ನು ತೀರ್ಮಾನ ಮಾಡಿಕೊಳ್ಳುವುದಕ್ಕೆ ಅಥವಾ ಸರಿಪಡಿಸಿಕೊಳ್ಳುವುದಕ್ಕೆ ಮಾತ್ರ ಇನ್ನೂ ಯುದ್ಧ ನೀತಿಯನ್ನು ಅನುಸರಿಸುತ್ತಿರುವರು. ಅಂತರ್ರಾಷ್ಟ್ರೀಯ ನ್ಯಾಯನೀತಿಗಳು ಇನ್ನೂ ಅನಾಗರಿಕಸ್ಥಿತಿಯಲ್ಲೇ ಇವೆ. ಅಂತರ್ರಾಷ್ಟ್ರೀಯತ್ವ ತತ್ವವಾಗಿಯೇ ಉಳಿದಿದೆ; ಅದು ಜೀವನದ ಸತ್ಯವಾಗಿಲ್ಲ.

## ಮೈಸೂರು ವಿಶ್ವವಿದ್ಯಾನಿಲಯ

# ಪ್ರಚಾರಪುಸ್ತಕಮಾಲೆ

೧ **ಖಗೋಳಶಾಸ್ತ್ರ ಪ್ರವೇಶ**—
ಸಿ. ಎನ್. ಶ್ರೀನಿವಾಸ ಅಯ್ಯಂಗಾರ್, ಡಿ ಎಸ್ ಸಿ.

೨. **ಸಮಾಜದ ರೋಗ ರುಜಿನಗಳು**—
ಜಿ. ಹನುಮಂತರಾವ್ [illegible]

೩. **ತೆರಿಗೆ**—ಬಿ. ಆರ್. ಸುಬ್ಬರಾವ್, ಎಂ.ಎ.

೪. **ನವರತ್ನಗಳು**—ಎಚ್. ಸುಬ್ಬಜೋಯಿಸ್, ಎಂ.ಎಸ್ ಸಿ.

೫. **ನಮ್ಮ ಹಳ್ಳಿಗಳು**—ಜಿ. ಎನ್. ಕೃಷ್ಣಮೂರ್ತಿ, ಎಂ.ಎ.

೬. **ಕುಮಾರವ್ಯಾಸ**—ಎಸ್. ವಿ. ರಂಗಣ್ಣ, ಎಂ.ಎ.

೭. **ಹಂಪೆಯ ಹರಿಹರ**—ಡಿ. ಎಲ್. ನರಸಿಂಹಾಚಾರ್, ಎಂ.ಎ

೮. **ಕನ್ನಡಸಾಹಿತ್ಯ**—ಕೆ. ವೆಂಕಟರಾಮಪ್ಪ, ಎಂ.ಎ.

೯. **ವಿದ್ಯುಚ್ಛಕ್ತಿಯ ವೈಭವ**—ಬಿ. ಎ. ಕೃಷ್ಣಸ್ವಾಮಿರಾವ್, ಎಂ.ಎಸ್ ಸಿ.

೧೦. **ಪಂಪ**—ತೀ. ನಂ. ಶ್ರೀಕಂಠಯ್ಯ, ಎಂ.ಎ.

೧೧. **ಪ್ರಾಣಿಜೀವನ**—ಎ. ನಾರಾಯಣರಾವ್, ಎಂ.ಎಸ್ ಸಿ.

೧೨. **ಕನಸುಗಳು**—ಎನ್. ಎಸ್. ನಾರಾಯಣಶಾಸ್ತ್ರಿ, ಎಂ.ಎ.

೧೩. **ಮದುವೆ**—ನಾ. ಕಸ್ತೂರಿ, ಎಂ.ಎ., ಬಿ.ಎಲ್.

೧೪. **ನಮ್ಮ ಆರ್ಥಿಕ ದೃಷ್ಟಿ**—ಎಸ್. ಗೋಪಾಲಸ್ವಾಮಿ, ಎಂ.ಎ.

೧೫. **ವಾಯುಗುಣ**—ಕೆ. ಶೇಷಾದ್ರಿ ಅಯ್ಯಂಗಾರ್, ಎಂ.ಎಸ್ ಸಿ., ಎಲ್ ಎಲ್.ಬಿ.

೧೬. **ಬೆಳಕು**—ಟಿ. ಎಸ್. ಸುಬ್ಬರಾಯ, ಎಂ.ಎಸ್ ಸಿ.

೧೭. **ಕರ್ನಾಟಕ ಕಾದಂಬರಿ**—ವಿ. ಸೀತಾರಾಮಯ್ಯ, ಎಂ.ಎ.

(ಪು. ತಿ. ನೋ.)